ಶಿವಾನುಭವ ಗ್ರಂಥಮಾಲಾ ನಂ|| ೩೫.

# ಹರಿಹರನ ರಗಳೆಗಳು.

ಭಾಗ ೨.

—*—

ಸಂಪಾದಕರು.

**ರಾ|| ಸಾ|| ಫ. ಗು. ಹಳಕಟ್ಟಿ,**

ಬಿ. ಎ. ಎಲ್. ಎಲ್. ಬಿ. ವಿಜಾಪುರ.

---

೧೯೩೩.

**ಬೆಲೆ ೪ ಆಣೆ.**

ಇದನ್ನು ವಿಜಾಪುರದಲ್ಲಿ
ರಾ॥ ರಾ॥ ಫ. ಗು. ಹಳಕಟ್ಟಿ ಇವರು ತಮ್ಮ
**"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"** ನಲ್ಲಿ ಮುದ್ರಿಸಿದರು
ಮತ್ತು ಅವರು ವಿಜಾಪುರದಲ್ಲಿ
ಉಪಲಿಬುರುಜದ ಹತ್ತರ ತಮ್ಮ ೧೬೨೦ (ಅ) ನೇ
ಮನೆಯಲ್ಲಿ ಪ್ರಸಿದ್ಧಿಸಿದರು.

# ಪ್ರಸ್ತಾವನೆ.



ಇದರಲ್ಲಿ ಹರಿಹರನು ರಚಿಸಿದ ಪ್ರಭುದೇವರ ರಗಳೆ ಮತ್ತು ರೇವಣ ಸಿದ್ಧೇಶ್ವರ ರಗಳೆ ಎಂಬ ಎರಡು ರಗಳೆಗಳು ಪ್ರಸಿದ್ಧಿಸಲ್ಪಟ್ಟಿವೆ. ಇವುಗಳು ಶ್ರೀ ಕಲ್ಲಿನಾಥಾರ್ಯರು ಮು. ದಂಡಿನಶಿವರ ಜಿ. ತುಮಕೂರು ಇವರಲ್ಲಿಯ ಒಂದು ಪ್ರತಿ ಮತ್ತು ಮೈಸೂರ ಓರಿಯೆಂಟಲ್ ಲೈಬ್ರರಿಯಲ್ಲಿ ದೊರೆತ ಒಂದು ಪ್ರತಿ ಇವುಗಳ ಸಹಾಯದಿಂದ ಮುದ್ರಿಸಲ್ಪಟ್ಟಿವೆ. ಈ ಉಭಯತರಿಗೆ ನಾವು ಬಹಳ ಆಭಾರಿಯಾಗಿದ್ದೇವೆ.

**ವಿಜಾಪುರ.**
ತಾ. ೧೩-೫-೧೯೩೩.

**ಫ. ಗು. ಹಳಕಟ್ಟಿ,**
ಸಂಪಾದಕ.



# ಅನುಕ್ರಮಣಿಕೆ.

# ಹರಿಹರನ ರಗಳೆಗಳು.

## ಭಾಗ ೨.

## ಪ್ರಭುದೇವರ ರಗಳೆ.

**ಕಂದ**॥ ಶ್ರೀವಿವಿಧ ಶರಣ ಹೃತ್ಕಮಲ । ಲಾವಾಸಂಸಕಳಪೇವಸೇವ್ಯಂ ಮೆರೆದಂ ॥ ಸೀಲಗ್ರೀವಂ ಅಲ್ಲಮ । ದೇವನನೊಲವಿಂದೆ ಹಂಪೆಯ ವಿರೂಪಾಕ್ಷಂ ॥

### ಲಲಿತ ರಗಳೆ.

ಶ್ರೀಗಣಸಿಕಾಯದಿಂದೊಪ್ಪೆ ಕೈಲಾಸದೊಳ್
ಭೋಗಸಿಥಿ ಹಂಪೆಯ ವಿರೂಪಾಕ್ಷನೊಪ್ಪದೊಳ್
ಹರುಷದಿಂದೋಲಗಂಗೊಟ್ಟು ಕುಳ್ಳಿರೆ ಬಂದು
ಶರಣರೊಳಗೊಬ್ಬ ನಿರ್ಮಾಯನೆಂಬಂ ಸಂದು
ಸುರಸತಿಯರೊಳಗೊಬ್ಬಳಂ ನೋಡಲಳುಪಿಂದೆ
ಹರನವರನೀಕ್ಷಿಸುತ್ತಂ ದಯಾಪರದಿಂದೆ
ನೀವಿರ್ವರುಂ ಪೋಗಿ ವಸುಮತಿಯೊಳಗೆ ಪುಟ್ಟಿ
ಕಾವಂಗೆ ವಶವಾಗಿ ಸಕಲಸುಖಮಂ ಮುಟ್ಟಿ
ಹರುಷದಿಂದಿರ್ಬರುಂ ಬರ್ಪುದೆಂದೊಸೆದಿತ್ತ
ಹರನ ಬೆಸದಿಂದೀರ್ವರುಂ ನಲಿದು ಬರಲಿತ್ತ

ನರಲೋಕದೊಳಗೆ ಭೂಮಿಗೆ ತೊಡವಿದೆಂದೆನಿಪ
ಶರಣಸಂಕುಳಕೆ ತೇಜೋತ್ಸಾಹವೆಂದೆನಿಪ
ಸೂತ್ರಿಸಿದ ನವ ಸೋಮಸೂರ್ಯವೀಧಿಗಳೆಸೆವ
ನೇತ್ರತ್ರಯನ ಚಾರುಭವನಿಕೆಗಳಿಂ ಮೆರೆವ
ಹರನ ಪ್ರಸಾದ ಪಾದೋದಕದೊಳುಂ ಬಾಳ್ವ
ಪುರಹರನ ಶರಣರಿಂದಂ ಸಂಪದವನಾಳ್ವ
ಶಿವನ ಸದ್ಭಕ್ತಿಯಲ್ಲಿಯೇ ಸಂಪದವನಾಳ್ವ
ಭವನ ಕಾರುಣ್ಯದಿಂ ಭಕ್ತಿಯಿಂದೇಯಾಳ್ವ

ಶಿವನ ಸದ್ಭಕ್ತಿಯಲ್ಲಿಯೆ ಸಫಲವೆಂದೆನಿಸಿ
ಭವನೊಲ್ದು ನೆಲಸಿರ್ಪ ಸೆಜ್ಜೆ ತಾನೆಂದೆನಿಸಿ
ಬಳ್ಳಿಗಾವಿಯೆ ನಿಪ್ಪ ಪುರ ವರಂ ರಂಜಿಪುದು
ಪಲ್ಲವಿಪ ಶರಣ ಸಂಕುಳದಿಂ ವಿರಾಜಿಪುದು
ಅಲ್ಲಿರ್ಪ ನಾಗವಾಸಕ್ಕೆ ಯಧಿಪತಿಯಪ್ಪ
ಸಲ್ಲಲಿತ ನಾಯಕನ ಸತಿಯು ಬಸಿರೋಳ್ಪಿರ್ಪ
ಸೆವದಿಂಪೆ ನಿರ್ಮಾಯನಿರ್ದನಾ ಬಸಿರೊಳಗೆ

ನವ ಯೌವ್ವನೆಯ ಗರ್ಭದೊಳಗುದಿಸಿ ತೊಳತೊಳಗೆ
ಹೊರಗೆ ತೋರಿದುದವಯವಂ ಗರ್ಭ ಚಿಹ್ನಮಂ
ತುರುಗಿದವು ಲಾವಣ್ಯವೊಪ್ಪವಿಡಿದಂಗವಂ
ನಡೆವೊಳ್ಪಿನೆೞ್ಗಿಗೆಯೆ ತೊಡೆ ಥಾಳದೊಳ್ಪೊಳೆಯೆ
ನಡು ಬಟ್ಟವಾಗಿ ಸಿಲಿ ಕುಡಿ ಕಪ್ಪುವೊಲಿ ಬೆಳೆಯೆ
ಪೊಕ್ಕುಳುಣ್ಮುತ್ತಮಿರೆ ಮಿಕ್ಕು ಕೀಳ್ಪೊಡೆಯಲರೆ
ಅಕ್ಕರದಿ ಕೊರ್ಬಿದ ಜಘನ ಉರ್ಬಿ ಬೀಗುತಿರೆ
ತ್ರಿವಳಿ ಬಸುರಿಂ ಪಾರೆ ಪೊಸಬಾಸೆ ಮೊಯ್ದೋರೆ
ಅವಯವಂ ಚೆಲ್ವಾಗೆ ಬಾಹುಯುಗದಳವೇರೆ
ಮೊಗವಲರ್ದು ಬೆಳ್ಪಾಗೆ ಮಿಗೆ ಮಾತು ತೆಳ್ಪಾಗೆ
ಬೊಗಸೆಗಣ್ಬೆಳುಪಾಗೆ ಕದಪು ಮಿಗೆ ನಯವಾಗೆ
ನವಮಾಸವಾದುದಾಕೆಗೆ ಚೆಲ್ವು ಮಿಗಿಲಾಗೆ
ನವಕುಮಾರಕನುದಯವಾಗಲುದ್ಯತನಾಗೆ
ಅನುವಾಗೆ ಶುಭದಿನಮುಹೂರ್ತಂಗಳೈತಂದು
ಕಂತುಮದಹರನ ಬೆಸದಿಂ ಪುಟ್ಟಲನುವಾಗೆ
ಜನಿಯಿಸುವ ಸಮಯಮಂ ಪಾರುತ್ತಮಿರಲಂದು

ವಾಸವ ದಿಶಾಮುಖದೊಳರ್ಕನುದಯಿಸುವಂತೆ
ಭಾಸುರದ ಪಾಲ್ಗಡಲೊಳಿಂದು ಜನಿಯಿಸುವಂತೆ
ವಸುಧೆಯೊಳ್ಸುರಕುಜದ ಸಸಿ ಪುಟ್ಟುವಂದದಿಂ
ಶಿಸುವೆನಿಸಿ ಪುಟ್ಟಿದಂ ನಿರ್ಮಾಯನೊಪ್ಪದಿಂ
ಆಗಳನುರಾಗದಿಂದುಮೆಶಿವರ್ಪರಸುತಿರೆ
ನಾಗವಾಸಾಧಿಪತಿಯಕ್ಕರಿಂ ನಲಿವುತಿರೆ

ಮಂಗಳವೆ ರೂಪುಗೊಂಡಂದದಿಂ ಶಿಶು ನೆರೆಯೆ
ಲಿಂಗದಂಘ್ರಿಯೊಳೆ ನೋಟಂ ಮಿಕ್ಕು ಕಣ್ದೆರೆಯೆ
ಆಭವರೂಪಿಂದೆಸೆಯೆ ಜಾತಕರ್ಮಂ ಮಾಡೆ
ಶುಭಲಗ್ನವೆಂದು ಮುಹೂರ್ತಿಕರ್ಕೊಂಡಾಡೆ
ಗೊಗ್ಗೇಶ್ವರ ಪ್ರಸಾದದ ಬೆಣ್ಣೆಯಂ ತಂದು
ಹಿಗ್ಗುತ್ತಲಿಕ್ಕಿದಳು ಜನನಿ ನೇಹವಲಂದು
ನಾಮಕರಣಂ ಜಗಕ್ಕಲ್ಲಯ್ಯನೆಂದಾಗೆ
ಭೂಮಿಯೊಳು ನಿರ್ಮಾಯನೆಂಬ ಪೆಸರಂತಾಗೆ

ತೊಟ್ಟಿಲೊಳ್ಕೈಗಳೊಕ್ಕ್ರಮದಿಂದೆ ಬೆಳೆಬೆಳೆದು
ದಟ್ಟಡಿ ಯಿಡುತ್ತೆ ಪರೆದಾಡುತ್ತೆ ಜೆಳೆಜೆಳೆದು
ಬೆಳೆದನಾತಂ ಶಿವಪದಕ್ಕೆ ಪೊಸತೊಡವೆನಿಸಿ
ಬೆಳೆದನಾತಂ ಭಕ್ತಿವಾರುಧಿಗೆ ವಿಧುವೆನಿಸಿ
ಇಂತು ಬೆಳೆಯಲ್ಬೆಳೆದುದಾತನೊಡನೇ ವಿದ್ಯೆ
ಸಂತತಂ ಸೊಗಯಿಪ ಮೃದಂಗದ ಮಹಾವಿದ್ಯೆ
ಆ ವಿದ್ಯೆಯೊಡನೆ ಜವ್ವನವೆಸೆದು ಬೆಳೆವುತಿರೆ
ಕಾವಂಗೆ ಸಿಂಗರದ ಪುರುಡು ಪುಟ್ಟುತ್ತುಮಿರೆ
ನನೆಯಂಬು ಬಿಲ್ಲ ಹಂಗಿಲ್ಲದಂಗಜನೆನಿಪ
ವನಿತೆಯರ ಮನವನಿರ್ಕುಳಿಗೊಳ್ವನಿವನೆನಿಪ

ಹರೆಯದೊಳ್ಗಿರಿಜೇಶನಂ ಕೇಳಿಸಲ್ಕೆಂದು
ಹರುಷದಿಂ ಗೊಗ್ಗೇಶ್ವರಾಲಯಕ್ಕೈತಂದು
ಒಡನೆಯಾ ಮೃದಂಗಧರರಿತ್ತರದೊಳ್ನಿಲಿಸಿ
ನಡುವೆ ಸಿಂಗರಿಸಿ ರಂಗಂಬೊಕ್ಕು ಮೇಳೈಸಿ
ಅತಿರಸಾಮೃತಕಾಂತಿಯುತ ಸುಖಾಸ್ಪದವೆಂಬ
ನುತಗತಿ ನವೀನಗತಿ ರಸಗತಿಗಳೆಂದೆಂಬ
ನುಣ್ಗತಿ ಸುಗಂಭೀರ ಗತಿ ಸಾಂದ್ರ ಗತಿ ಯೆಂಬ
ಜಾಣ್ಗತಿ ಮಧುರಗತಿ ಮನೋಹರಗತಿ ಯೆಂಬ
ಸುಗತಿ ಶರ್ವಂಗೆ ಕರ್ಣಾಭರಣವಾಗುತಿರೆ
ಬಗೆಗೆ ಪರಮಾನಂದರಸದ ತೆರೆಯಾಗುತಿರೆ

*

ನಂದಿ ಮಹಾಕಾಳರಂ ಮರೆವುತಿರೆ ಶಂಕರರ
ನಂದ ಮುರುಜದ ಗತಿಗೆ ಮೆಚ್ಚುತಿರಲೀಶ್ವರಂ

ಇಂತು ಕೇಳಿಸುತಮಿರೆ ಯಲ್ಲಮಂ ನಲಿದಿತ್ತ
ಕಂತುಹರವರದಿಂದೆ ಸುರಕಾಂತೆ ಯಿರಲತ್ತ
ಆ ಪುರದ ಧನದತ್ತನಬಲೆ ಯುದರದಿ ಪುಟ್ಟಿ
ರೂಪಿನೊಳು ರತಿಗೆ ಸರಸ್ವತಿ ಗುಪ್ಪರಂ ಗಟ್ಟಿ.
ವಸುಧೆಯೊಳು ಕಾಮಲತೆ ಯೆಂದೆಂಬ ನಾಮದಿಂ
ಒಸೆದು ಸೌಭಾಗ್ಯಲತೆ ಕುಡಿಯಿಡಿಲ್ಪ್ರೇಮದಿಂ
ಶಶಿಕಿರಣದಂತೆ ಬೆಳೆದಳ್ಬೆಳೆದಳಮ್ಮಮ್ಮ
ಕುಸುಮಶರದಂತೆ ನೆರೆದಳ್ನೆರೆದಳಮ್ಮಮ್ಮ
ರತಿಗಿತಿಯು ರಂಬೆಗಿಂಬೆಯು ಮಾತು ಬೇಡಿಲ್ಲಿ
ಮತಿಗಿತಿಗೆ ಪೊಗಳ್ವಗಿಗಳ್ವಾಸೆಗಳು ಪುಗವಿಲ್ಲಿ
ಈ ತೆರದೊಳೆಸೆವ ಸೊಬಗಿನ ಸೊಂಪನೊಳಕೊಂಡು
ಭೂತೇಶವಂದನೆಗೆ ನೇಮಮಂ ಕೈಕೊಂಡು
ಮದನಶರದಿಕ್ಷುಧನುವಿಂದೆ ಪೊರಮಡುವಂತೆ
ಪದೆದು ಸುವಿಟರ ಮೇಲೆ ದಾಳಿ ಪೊರಮಡುವಂತೆ
ಶಿವನ ಭವನಕ್ಕೆ ಪೊರಮಟ್ಟಳಾ ಕಾಮಲತೆ
ಭವಭಕ್ತಿಯಿಂದೆ ರಾಜಿಸುವಮಳ ಪುಣ್ಯಲತೆ
ಇಕ್ಕೆಲದೊಳಬಲೆಯರ ಮುಸುಕಃ ಮುಸಗುತ್ತಲಿರೆ
ಪಕ್ಕದೊಳ್ನಡೆವ ಸತಿಯರು ಸಂದಣಿಸುತಮಿರೆ
ಮುಸುಕಿನೊಳು ಸಿಲ್ಕಿ ನಿಲ್ವ ವಿಟರ್ಗಳಲ್ಲಲ್ಲಿ
ನಸುನೋಟದೊಳ್ಸಿಲ್ವ ನವ ಯುವರ್ಕೆಲರಲ್ಲಿ
ನೇಪುರದ ನುಣ್ದನಿಯೊಳೆಳಲುತಿರ್ಪರ್ಕೆಲರು
ಭಾವಕದ ನಡೆಯೊಳಗೆ ಸಿಲ್ಕಿ ನಿಲ್ವರ್ಕೆಲರು
ಇಂತು ವಿಟರಂ ಗೋರಿಗೊಳಿಸುತುಂ ನಡೆತಂದು
ಸಂತಸಂ ಮಿಗೆ ಶಂಭುವಿನ ನಿಳಯಕೆಯ್ತಂದು
ಒಳಪೊಕ್ಕು ಶಿವಲಿಂಗವಂ ದರುಶನಂ ಮಾಡಿ
ಎಳಸಿ ಕೈಯೆತ್ತಿ ಪೊಡಮಡುತಳ್ಕರಿಂ ನೋಡಿ

ತಿರುಗಿ ಬರುತಿರಲವುವು ರಂಗಮಂಟಪದಲ್ಲಿ
ಹರವರಿಯ ಮುರಜಗತಿಗಳ್ಪೊಣ್ಮುತಿರಲಲ್ಲಿ
ಪಾದರಿಯ ಪೂದುರುಂಬಿನ ಪೊಸಬನೊಪ್ಪಿದಂ
ಕೇದಗಿಯ ಮಿಸುಪೆಸಳ ಕಿರುಮಿಂಡನೊಪ್ಪಿದಂ
ಕತ್ತುರಿಯ ತಿಲಕದ ಕುಮಾರಾಂಕನೊಪ್ಪಿದಂ
ಮುತ್ತಿನೇಕಾವಳಿಯ ಮುಗ್ಧನಿಂತೊಪ್ಪಿದಂ
ಹೊಳೆವ ಬೆಳತಿಗೆಗಂಗಳೆಳೆಯನೊಪ್ಪುತ್ತಲಿರೆ
ತೊಳಪ ಕರ್ಣಾಭರಣದರಸನೊಪ್ಪುತ್ತಲಿರೆ
ಸವಿಗೊಡುವ ಸುಗತಿಗಳ ಸೊಬಗನೊಪ್ಪುತ್ತಲಿರೆ
ಸವನೆಲೆಯ ಸೊಗಸಿನ ಸುಖಾತ್ಮನೊಪ್ಪುತ್ತಲಿರೆ
ನಿಂದಂತೆ ನಿಂದಳಲ್ಲಮನ ನಿಲವಂ ಕಂಡು
ಸಂದಳಾ ಪೊಸ ರೂಪು ರೇಖೆಗೆ ಮನಂಗೊಂಡು

ನೋಡುತಿರೆ ಬಾಡುತ್ತ ಕೆಲಬಲಕೆ ಸಾರುತ್ತೆ
ನೋಡೆ ಭೋಂಕನೆ ಕಂಡನಲ್ಲಮಂ ಕಾಣುತ್ತೆ
ಹರಹರಾ ಮರೆದೆನಾ ಸುಗತಿಯುಂ ಮುರಜಮಂ
ಹರಹರಾ ಮರೆದೆನಾ ಶಿವನುಮಂ ತನ್ನುಮಂ
ಕಂಟಕಿತವಾದವೆರಡುಂ ದೃಷ್ಟಿ ಪ್ಸೃದೋರೆ
ಗಂಟಿಕ್ಕಿದವು ನೋಟವೆಯ್ದೆ ಕಾಮಂ ಮೀರೆ
ಇಕ್ಕಿದೆರಡುಂ ಕೈಗಳಿಕ್ಕಿದಂದದೊಳಿರಲು
ಪಕ್ಕವಣಿಗರ ಮೇಲೆ ಜೋಲ್ದು ಮೂರ್ಛೆಗೆ ಸಲಲು
ಸಡಿಲಿಸಿದರೊಯ್ಯನೆ ಮೃದಂಗಮುಮನತ್ತಿತ್ತ
ಒಡಗೊಂಡು ಪೋಗಲುದ್ಯೋಗಮನರಾಗುತ್ತ

ಇರೆ ಕಾಮಲತೆಯ ಸತಿಯರ್ಕರಂ ನಡನಡುಗಿ
ಪರಿಬೇರೆ ಕೊಂಡೊಯ್ಯಲಾಗದೆನುತಂ ಕಡಗಿ
ತಿಳಿಯುಬಾರದು ಬಾರದೆಲೆಲೆ ಹರಣದ ಹರಿವು
ಇಳೆಗೆ ಕರ ಪೊಸತು ಕೊಳ್ಳದಿಲೆ ನಿಮ್ಮರಿವು
ಕೊಂಡು ನಡೆ ಯಿರ್ಬರುಮನೆಮ್ಮ ಸೆಜ್ಜೆಯ ಮನೆಗೆ
ಕಂಡೆವಿಲ್ಲಿಂತಪ್ಪ ನೇಹಮಂ ಪೊಸತೆಮಗೆ

ಎನುತೆ ಸಜ್ಜವಳಿ ಜಂತ್ರಂಗಳಂ ತರ್ಪಂತೆ
ತನತನಗೆ ಬೆರಗಾಗಿ ಗುಜುಗುಜುಂ ಗೊಳುತಿಂತೆ
ಸಂದಣಿಸಿ ಕಾಮಲತೆಯರಮನೆಯೊಳಂ ಪೊಕ್ಕು
ತಂದು ಸೆಜ್ಜೆಯ ಮನೆಗೆ ಕರ ಕೌತುಕಂ ಮಿಕ್ಕು
ಸಿರಿ ಮಂಚದೊಳಗಿರ್ವರುಮನೊಲಿದು ಕುಳ್ಳಿರಿಸಿ
ಸರಿದರೆಲ್ಲಾ ಸತಿಯರುಂ ಮೆಲ್ಲನೋಸರಿಸಿ
ಆರರೆ ಸುರತದ ಸುಖದ ಕಡೆಬಿಟ್ಟ ತವಕಿಗಳು
ತರತರದ ಹರುಷದಿಂ ಕಂದೆರೆದ ವಿರಹಿಗಳು
ಹೊರೆವ ಪೊಸ ಸುಗ್ಗಿಯುಂನದನೇನನೆಂದಪೆಂ
ನೆರೆವ ನೇಹದ ಸುಖದ ಹೆಂಪನೇನೆಂದಪೆಂ
ಪರಿಮಿತದ ಕಡೆಬಿಟ್ಟು ತವಕ ನಿಮಿರುತ್ತಮಿರೆ
ಪರಿಪರಿಯ ಸಮಸುಖದ ಸವಿಗಳರಳುತ್ತಮಿರೆ
ಆಲಿಂಗನದೊಳಿರ್ವರೋರ್ವರಾಗುತ್ತಮಿರೆ
ಸೋಲದ ಸೊಗಸು ಮನವನೋಲಾಡಿಸುತ್ತಮಿರೆ
ಕಣ್ಗಳರೆ ಮುಗಿವುತಿರೆ ಕರಣತತಿ ಕರಗುತಿರೆ
ನುಣ್ಗೊರಲ್ನುಡಿವುತಿರೆ ಮೆಯಿ ಉಕ್ಕುತಂತುಮಿರೆ
ಕದಪು ಬೆಮರುತ್ತಮಿರೆ ಲಲ್ಲೆಗಳ್ಗೊಣ್ಮುತಿರೆ
ತೊದಲು ಮೀರುತ್ತಮಿರೆ ಸುಯ್ನೀಳ್ದು ಸೂಸುತಿರೆ
ಪುಳಕವಿರ್ಪ್ಪಗಡರೆ ನಲಿವು ದಳವೇರುತಿರೆ
ನಳನಳಿಸಿ ಬೆಳಪ ಸುಖವಲ್ಲಿ ಪಲ್ಲವಿಸುತಿರೆ
ಕಡೆ ಮೊದಲ್ನಡುವಿಲ್ಲದೆತ್ತರದ ಕಾಮಿಗಳು
ತಡವು ತವಕದೊಳದ್ದ ನವನವ ಪ್ರೇಮಿಗಳು
ಪಲವು ಸಂವತ್ಸರಂ ನಿಮಿಷವಾಗುತ್ತಮಿರೆ
ತೊಲಗದಲುಗದ ಸಲುಗೆ ಸವಿಗಳಂ ಸಲಿಸುತಿರೆ
ಇರ್ವರೀರ್ವರುಮೊಲ್ದು ಸಮಕಳೆಗಳೊಡಗೂಡಿ
ಸಾರ್ದ ಹರವರಿಯ ಹರುಷದ ಶರಧಿಯೊಳ್ಕಾಡಿ
ಮುಟ್ಟಿದ ಸುಖಕ್ಕೆ ಕುರುಳಂ ಬೆರಳನೀವುತಂ
ಕಟ್ಟಿಕ್ಕರಿಂದುರಂ ಮುಡುಹುಮುಮನೀವುತಂ
ತನು ಮನಂ ಧನವನಾ ಕಾಮಲತೆಗೀವುತಂ
ನೆನದುದಂ ನೋಡಿದಂ ಕಾಮಲತೆಗೀವುತಂ

ಇಂತು ಪಲವುಂ ಕಾಲ ತೊಲಗದಲುಗದೆ ಇರ್ದು
ಕಂತುಹರನಿತ್ತಾಜ್ಞೆ ಹತ್ತಿರಕೆ ಬಂದಿರ್ದು
ಕಾಮಲತೆಯುಂ ಬಂದು ಹತ್ತಿತ್ತು ಮಹಜ್ವರಂ
ಸೋಮಕಳೆಯುಂ ರಾಹು ತುಡುಕುವಂತಿರೆ ಕರಂ
ಜ್ವರದ ಪರಿತಾಪದಿಂದವಯವಂ ಸೀಳುತಂ
ತರುಣಿ ಸೈರಿಸಲಾರದೇಳುತಂ ಬೀಳುತಂ
ಈ ವಸುಧೆಯೊಳಗಣ ಸುಖಂ ತನಗೆ ಸಾಕೆಂದು
ದೇವಲೋಕಕ್ಕೆ ನಡೆವಳ್ಕಾಮಲತೆ ಯೆಂದು
ಆಗಳಾ ಜನನಿಜನಕರ್ಮೊಱೆಯಿಡುತ್ತಂದು
ಸಾಗಿಪ ಸಖೀಜನಂ ಹರಣಗಳೆವುತ್ತಂದು
ಸಂದ ಬಾಂಧವಸಂಕುಲಂ ಬಾಯ್ಬಿಡುತ್ತಮಿರೆ
ನಿಂದವರ್ನೆರದವರ್ಕಣ್ಣೀರನಿಕ್ಕುತಿರೆ

ಆ ರಣರಣಕದೊಳಲ್ಲಮನನೇನನೆಂದಪೆಂ
ಸಾರ ಸರ್ವಸ್ವವರತನನೇನನೆಂದಪೆಂ
ಅರೆದಂತೆ ಕಂಡರಿಸಿದಂತೆ ಕರುವಿಟ್ಟಂತೆ
ಮರುಳಂತೆ ಮರೆದಿರ್ದರಂತೆ ಮಸವಟ್ಟಂತೆ
ಉರವಣೆಯ ದುಃಖ ಒಳಗೇರೆ ಬಿಸುಸುಯ್ಯುತುಂ
ಪರಿಪರಿಯ ಶೋಕಾಗ್ನಿಯುರಿಪೆ ನೆರೆ ಬೇವುತುಂ
ಇರ್ದಲ್ಲಮನನೆಲ್ಲರೆಂತಕ್ಕೆ ಸಂತೈಸಿ
ಸಾರ್ದು ಕೈಗೊಟ್ಟು ಮಿಗೆ ನಲ್ಮೆಯಿಂ ಬೋಳೈಸಿ
ತಂದರಾದರಿಸಿ ನಿಜ ಮಾತೃ ಪಿತೃವಿದ್ದೆಡೆಗೆ
ಕಂದನಿರವಂ ಕಂಡವರ್ಮರುಗಿ ಬೆರಗಾಗೆ
ನಿಂದನಲ್ಲಮದೇವನೊಳಗೊಳಗೆ ನೋವುತುಂ
ಸಂದ ನೇಹದ ಸದ್ಗುಣಂಗಳಂ ನೆನೆವುತುಂ
ಕಾಮಲತೆ ತನ್ನಮನಮಂ ಸುತ್ತಲಲ್ಲಮಂ
ಕಾಮಲತೆ ಹಾ ಕಾಮಲತೆ ಎನುತಲಲ್ಲಮಂ
ಮರುಗಿ ಮನವೆತ್ತಿಕ್ಕಿದಂತಾಗೆ ಪರಿತಂದು
ಪುರದ ಹೊರಗಣ ಕಣಿಗಿಲೆಯ ತೋಟಕೆಯ್ತಂದು

ಕುಳ್ಳಿರ್ದು ಚಿಂತೆಯೊಳಗಾಳುತುಂ ಮುಳುಗುತುಂ
ತಳ್ಳಂಕದಿಂದೆ ನೆಲನಂ ನೋಡಿ ಸುಯ್ಯುತುಂ
ತಲೆವಾಗಿ ಕಣ್ಣನೀರ್ಕರೆಯೆ ಚಿಂತಿಸುತಂದು

ನೆಲನಂ ಬರೆಯೆ ಬರೆದ ಹಜ್ಜೆಯೊಳಗಂತೊಂದು
ಮಿನುಮಿನುಗಿ ಹೊಳೆಹೊಳೆದು ನಸುವೆಳಗುದೋರುತುಂ
ತನಗೆ ಕೌತುಕವೇರೆ ಥಳಥಳಿಸಿ ಬೆಳಗುತುಂ
ಹರಹರ ಶಿವಜ್ಞಾನದಂಕುರಂ ತೋರ್ಪಂತೆ
ಪರಮ ಮುಕ್ತ್ಯಂಗನೆಯ ಕುಚದ ಕುಡಿತೋರ್ಪಂ
ಹೊನ್ನ ಕಲಶಂದೋರಲತಿಕೌತುಕಂ ಬಟ್ಟು
ತನ್ನಲಾರ್ಪನಿತನಿತು ಅಗೆಯಲಾರದೆ ಬಿಟ್ಟು
ಪರಿದು ಬಂದಾ ಪುರದ ನೃಪತಿಗರುಪಲ್ಕೇಳ್ದು
ಚರಿತದಿಂತಿದು ಚಿತ್ರವಿಚಿತ್ರವೆನುತಲೇಳ್ದು
ಪಟ್ಟದಾನೆಯ ಬೆಂಗೆಪಾಯ್ದು ನಡೆತರುತಮಿರೆ
ಪಟ್ಟಣದ ಹೊರವೊಳಲನೀಕ್ಷಿಸುತೆ ಬರುತಿರೆ
ಕಲಶವಿರ್ದಾ ಸೀಮೆಗೆಯ್ದು ಬರುತಿರೆ ಗಜಂ
ಚಲಿಸದಡಿ ಇಡದೆ ನಿಂದಿರೆ ಕಂಡು ಭೂಭುಜಂ
ಇದು ಚೋದ್ಯವೆಂದು ಗಜದಿಂದಿಳಿದು ನಡೆತಂದು
ಸದಮಳನೆನಿಪ್ಪಲ್ಲಮನ ಕೂಡೆ ನಡೆತಂದು
ಕಂಡಿದದ್ಭುತವೆನುತೆ ಪರಿಜನಕೆ ಕೈವೀಸೆ
ಕಂಡುದೆಲ್ಲಿಗಿಯು ತೊಡಗಿತು ಮಣ್ಣ ಹೊರಸೂಸೆ
ಕೋಟಿಗುದ್ದಲಿಗಳಿಕ್ಕಿದವು ಕೆಲಬಲದಲ್ಲಿ
ನೋಟಕಚ್ಚರಿ ಎನಲ್ ಅಗೆಯ ತೊಡಗಿದುದಲ್ಲಿ
ಕಳಶದಿಂ ಕೆಳಗೆ ಸೂತ್ರಿಕ ಸಿಂಹ ಮಂಟಪದ
ವಳಯ ವಿಶಾಲದ ವೃಷಭಾಂಕಿತ ಶಿವಾಲಯದ
ತುದಿ ಮೊದಲ್ಕಾಣಬರೆ ನಿಮಿಷದಿಂ ಬಿಡಿಸಿದರು
ಮುದದಿಂ ನೃಪಂ ನೋಡುತಿರಲಗೆದು ತೀರ್ಚಿದರು
ಆಗಳರಸಂ ಹರುಷದಿಂದೋಲ್ದು ಬಲವಂದು
ರಾಗದಿಂ ದೇವಾಲಯದ ಬಾಗಿಲೊಳ್ನಿಂದು
ಕದವ ತೆರೆದೊಳಪೊಕ್ಕು ನೋಡಲಾರ್ಪವರುಂಟೆ

ಹೆದರದಿದರೊಳಗಲಾರಯ್ಯಲಾರ್ಪವರುಂಟೆ
ಎನಲೋರ್ವರುಂ ನುಡಿಯದುಸಿರದಿರ್ದುದ ಕಂಡು

ಮನದೊಳಲ್ಲಮನತಿ ವಿರಕ್ತಿಯಂ ಕೈಕೊಂಡು
ಬೆರಲಿಲ್ಲ ಕಿವಿಯಿಲ್ಲ ಮುಡುಹು ಮುಂದಲೆಯಿಲ್ಲ
ಉರವಿಲ್ಲ ಮೂಗಿಲ್ಲ ಸತಿ ಕಾಮಲತೆಯಿಲ್ಲ
ಇನ್ನೇಕೆ ದೇವದ ದುರಾಸೆ ಇದ ಸುಡುಯೆಂದು
ತನ್ನ ಮನದೊಳಗೆ ನಿಶ್ಚೈಸಿ ಭರದಿಂದಂದು
ಬಿಸಸು ಬಿಸಸಾನೆ ಪೊಕ್ಕಪೆನೆಂದು ನುಡಿವುತಿರೆ
ನೊಸತು ಪೊಸತೆಂದರಸನಂದು ಬೆರಗಾಗುತಿರೆ
ಪರಿಜನಂ ಪುರಜನಂ ಕರಮರಿದೆನುತ್ತಮಿರೆ
ಪಿರಿಯರೀಕ್ಷಿಸುತಿವಂ ಕಾರಣಿಕನೆನುತಮಿರೆ
ಭಸಿತವಂ ಸರ್ವಾಂಗಕುದ್ಧೂಳನಂ ಗೊಂಡು
ಶಶಿಧರನೆ ಶರಣೆನುತೆ ಕಡುನಿಷ್ಠೆ ಕೈಕೊಂಡು
ನೂಂಕಿ ನಿಮಿರ್ದೊತ್ತುತ್ತೆ ಒಂದು ಕದಹಂ ತೆಗೆದು
ಘೋಂಕನೊಳಪೊಕ್ಕು ಲೋಕವಾರ್ತೆಯು ನೆರೆ ಮರೆದು
ಬಗೆ ಬೇರೆ ಪೊಸತಾಗೆ ಗಳಗಳನೆ ನಡೆತಂದು
ಪುಗುತಂ ಮಹಾಲಿಂಗದಂಘ್ರಿಗೆರಗುತ್ತಂದು

ಕೆಲನನೀಕ್ಷಿಸಲನುಮಿಷಯ್ಯಂಗಳೊಪ್ಪಿರಲು
ಚಲಿಸದಲುಗದ ಲಿಂಗ ನಿಜಸಿದ್ಧನೊಪ್ಪಿರಲು
ಬತ್ತಿ ಇಲ್ಲೆಣ್ಣೆ ಇಲ್ಲದ ದೀಪ್ತಿ ಬೆಳಬೆಳಗೆ
ಸುತ್ತಲುಂ ಶಿವಕಳೆಯೆ ಕಣ್ಬೆಳಗು ತೊಳತೊಳಗೆ
ತಿಳಿದ ನಿರ್ಮಳ ತತ್ವದಚ್ಚ ಬೆಳಗಿನೊಳಂದು
ತಳತಳಸಿ ನಳಿನಳಿಸಿ ಬೆಳೆದ ಬೆಳಗಿನೊಳಂದು
ಕೀಲಿಸಿದ ಪದ್ಮಾಸನಂ ಪುಲಿದೊವಲ್ತನುವ
ನಾಲಿಂಗಿಸಿದ ಭಸಿತವಮಳ ಸೂತ್ರಂ ಮೆರೆವ
ಬೆಳಪ ಕಣ್ಸಲಿಪಲ್ ಹೊಳೆವ ಮುಖಮಂಡಲಂ
ಇಳಿದ ಜಡೆ ರುದ್ರಾಕ್ಷಿಮಾಲೆ ಮಣಿಕುಂಡಲಂ
ಕೆಯ್ಯ ಶಿವಲಿಂಗದೊಳ್ನಟ್ಟ ನೋಟಂ ಮೆರೆವೆ

ಮುಖ್ಯ ಕೋಮಲತೆ ನಳನಳಿಸಿ ನಯನಮಂ ಕರೆಯೆ
ಮಿಗೆ ಬಳ್ಳಿವರೆದ ಕರಪದನಖಂ ಲತೆಯಾಗೆ
ಸೊಗಯಿಸುವ ಹಸ್ತರಾಗಂ ಸುಪಲ್ಲವವಾಗೆ
ಅರಲ್ದ ನಯನದ್ವಯಂ ವಿಕಸಿತ ಕುಸುಮವಾಗೆ
ಕರತಳದ ಶಿವಲಿಂಗವಮೃತರಸಫಲವಾಗೆ
ಕಲ್ಪತರುವಿನ ತೆಱದೊಳಿರ್ದನನುಪಮಯೋಗಿ
ಕಲ್ಪನೆಯ ವಶವಲ್ಲದಪ್ರತಿಮ ಶಿವಯೋಗಿ
ಕಣ್ಣಲ್ಲಿ ಜೀವಮಂ ಪಿಡಿದಿರ್ದ ಮಾಳ್ಕೆಯಿಂ
ತಿಣ್ಣವೆನೆ ಲಿಂಗಮಂ ಪಿಡಿದಿರ್ದನೊಲ್ಮೆಯಿಂ
ಇರೆ ಮಹಾ ಗುರುವನಲ್ಲಮದೇವನೀಕ್ಷಿಸುತೆ
ಹರುಷದಿಂ ಸಾತ್ವಿಕ ರಸಂ ಪುಟ್ಟೆ ಕಂಪಿಸುತೆ
ಸನ್ನಿಧಿಯ ಗುಣ ಶಿವಜ್ಞಾನಮಂ ಪುಟ್ಟಿಸಲು
ತನ್ನೊಳಗೆ ಶಿವನ ತತ್ವದ ಘನಂ ಪುಟ್ಟಿರಲು
ಪೊಗಳಲ್ಕೆ ತೊಡಗಿದಂ ಸಿದ್ಧ ಶಿವಯೋಗಿಯಂ
ಮಿಗೆ ಮೋಕ್ಷಲಕ್ಷ್ಮಿಯೊಡಗೂಡಿರ್ದ ಭೋಗಿಯಂ

ದೇವ ನಿರ್ಮಳ ನಿತ್ಯ ನಿರುಪಮ ಮಹಾಯೋಗಿ
ದೇವ ನಿರ್ಮಳ ನಿಜಾನಂದಕರ ಶಿವಯೋಗಿ
ಶಿವನನೊಚ್ಚತವಾಗಿ ಕೈಕೊಂಡ ಶಿವಯೋಗಿ
ಭವನ ಮೂರ್ತಿಗೆ ಸೊಲ್ತು ಕಣ್ಣಿಟ್ಟಚಲಯೋಗಿ
ನೋಟದೊಳು ಲಿಂಗಮಂ ಸೆರೆಗೆಯ್ದ ಶಿವಯೋಗಿ
ಕೂಟದೊಳು ಕಣ್ಣೆ ತನುವಾದ ಬೆಡಗಿನ ಯೋಗಿ
ಮದನನಂ ಮರ್ದಿಸಿಯೆ ಸಂದಿರ್ದ ಭವಯೋಗಿ
ಹೃದಯದೊಳು ಭಕ್ತಿಯಂ ತಳೆದಿರ್ದ ಸ್ಥಿರಯೋಗಿ

ಎಂದು ಪೊಗಳುತ್ತೆ ಕೈಯೆತ್ತಿ ನಿಲಲಲ್ಲಮಂ
ಸಂದ ಶಿವಯೋಗಿ ಹಿಗ್ಗುತ್ತ ಮಱೆದೆಲ್ಲಮಂ
ಮನದೊಳಗಿವಂ ಕಾರಣಿಕನೆಂದು ನಿಶ್ಚೈಸಿ
ತನುವಿನ ತೊಡಂಕು ಸಾಕೆಂದು ತಾಂ ನಿಶ್ಚೈಸಿ
ಘಳಿಲನಲ್ಲಮನು ಕೈಯೊಡ್ಡಲಂತಾಕ್ಷಣಮೆ

ಇಳಿಸಿದಂತಾಯ್ತು ಶಿವಲಿಂಗದ ನಿರೀಕ್ಷಣವೆ
ನೋಟದಿಂದಂಗಯ್ಯಲಿಕ್ಕಿದಂ ಲಿಂಗಮಂ
ಕೂಟದಚ್ಚಳಿಯುದಸು ವೆರಸಿ ಶಿವಲಿಂಗಮಂ
ಲಿಂಗದೊಡನೇ ಕೂಡಿ ಹೋದುದಾತನ ಜೀವ
ಅಂಗ ಮಲಗಿರ್ದುದಾ ಭಕ್ತಿಯುಂ ಬರಿಭಾವ
ಆಗಳಲ್ಲಮುಪವಯುವಂ ಲಿಂಗ ಸೋಂಕಿಂದೆ
ರಾಗದಿಂದಂಕುರಿಸಿ ನಳನಳಿಸಿ ಚೆಲ್ವಿಂದೆ

ಪೊರಮುಟ್ಟೆನಲ್ಲಮಂ ಗೊಗ್ಗೇಶ್ವರಂ ಮೆಚ್ಚಿ
ಬೆರಗಾಗಿ ನೋಡಲಮ್ಮದೆ ನೃಪಂ ಕಣ್ಮುಚ್ಚಿ
ಪೋಗುತಿರ್ದಂ ಲಿಂಗವೆತ್ತತ್ತಲೊಯ್ದತ್ತ
ಆಗುತಿರ್ದುದು ಪುರಜನಕ್ಕೆ ಕೌತುಕವಿತ್ತ
ನೋಡಿದೆತ್ತಣ ಕಾಮಲತೆ ಯೆತ್ತಣಲ್ಲಮಂ
ಕೂಡಿದುದು ಪುಣ್ಯಫಲವಿಂತಿವಂಗೆಲ್ಲಮಂ
ಎತ್ತಣದು ಕಳಶವೆತ್ತಣ ಶಿವಾಲಯವಿವಂ
ಎತ್ತಣದು ಶಿವನ ಸುಜ್ಞಾನ ಸುಖದನುಭವಂ
ಇರ್ದಿರ್ದು ಬಲ್ಲರಂ ಪೊಡೆದುದಿವನಂ ನೋಡ
ಪೊರ್ದಿದಂತಾಯ್ತು ಸಂಸಾರವಿವನಂ ನೋಡ
ಕಾಮಲತೆಗೊಲ್ದಿರ್ದನೆಂಬುದದು ಪುಸಿ ನೋಡ
ಪ್ರೇಮವದು ಶಿವಲಿಂಗಪೂಜೆ ಇದಿರಂ ನೋಡ
ಅಲ್ಲದಂತಿಂದಿವಂಗೀ ಪದಂ ಸಾರ್ವುದೇ
ಬಲ್ಲಿತೆನಿಸಿದ ಶಿವನ ಭಕ್ತಿ ಪೊಳಸಾರ್ವುದೇ
ಅಂಗೈಯೊಳಮೃತಫಳಮಂ ಪಡೆದನಲ್ಲಮಂ
ಬೆರಸಿದ ಗುಣತ್ರಯಕೆ ಬೇರಾದನಲ್ಲಮಂ
ದೇಹಾದಿಗುಣಗಳಂ ಮೀರಿದವನಲ್ಲಮಂ
ಮೋಹವರತುಂ ತಾನೆ ತಾನಾದನಲ್ಲಮಂ
ಪೊರೆಯು ಮಾಯೆಗೆ ಪುಸಿತನಾದನಿಂದಲ್ಲಮಂ
ಲಿಂಗನಿಜಮುಮನೊಚ್ಚತಂಗೊಂಡನಲ್ಲಮಂ
ಸಾಧನ ಚತುಷ್ಟಯುದ ಹಂಗ ಹೊದ್ದದಸಿವಂ
ಬೋಧೆಯುಕ್ಕರವರಿದು ನಿಜವಾದ ನಿಲವಿವಂ

ಕರತಳಾಮಳಕವಾದುದು ತತ್ತ್ವವೀತಂಗೆ
ಪರಮ ಶಿವಯೋಗ ನಿಜವಾದುದಿಂದೀತಂಗೆ
ಸಸಿರವಿಗಳಂತೆ ಬೆಳಬೆಳಗುತಿರ್ದಂ ನೋಡೆ
ಉಸಿರಲಿಲ್ಲದ ಪರಬ್ರಹ್ಮವಾದಂ ಕೂಡೆ

ಮುಡಿ ಸಡಿಲಿದುದನರಿಯ ಸೊಡನೆ ಬರ್ಪರನರಿಯ
ಅಪನಿ ಯೂರೆಂದರಿಯ ನಾಳಿಗೊಳ್ವರನರಿಯ
ಕೇಳಿ ಹೊಗಳ್ವರನರಿಯ ನಾಡೊಡೆಯನೆಂದರಿಯ
ಪಿರಿ ಜಗಮುಮನರಿಯ ನಾಳೆಂದೆಂಬುದನರಿಯ
ನಾಹಾ ಪರಮಜ್ಞಾನದರಿವಿನೆಚ್ಚರ ಮರವೆ
ಆಹಾ ಹುಸಿ ಜಗದ ಸಟೆ ಬೆರಸದಚ್ಚರಿವೆ
ಎಂದು ಪುರಜನವಿತ್ತ ಕೌತುಕಂಬಡುತಮಿರೆ

ಬಂದನಲ್ಲಮನರಣ್ಯಂ ಹೆಚ್ಚಿ ಹಿಗ್ಗುತಿರೆ
ಎಲೆಲೆ ಶಿವಲಿಂಗ ದೃಷನೀ ಬಂದನೀ ಬಂದ
ಎಲೆಲೆ ನಿರ್ಮಳಸಿದ್ಧನೀ ಬಂದನೀ ಬಂದ
ಎಂಬಂತೆ ಕೋಗಿಲೆಗಳಲ್ಲಲ್ಲಿ ಯುಲಿವುತಿರೆ
ಇಂಬಿಸಿಂದರೆಗಿಳಿಗಳಲ್ಲಲ್ಲಿ ನುಡಿವುತಿರೆ
ನಡೆದುದೇ ಬಟ್ಟೆಯಾದುದು ಶಿವನ ಮುದಕರಿಗೆ
ನುಡಿದುದೇ ವೇದವಾದುದು ಲಿಂಗವಂತಂಗೆ
ಮುಟ್ಟಿದ ಮರಂ ಮನುಜರಾಗಿ ನಡೆದವು ಕೆಲವು
ಮುಟ್ಟಿದ ಪ್ರಾಣಿ ಸ್ವರ್ಗಕ್ಕೆ ನಡೆದವು ಕೆಲವು
ಮರನೊಡನೆ ನೆಳಲಾಗಿ ಬರುತಮಿರ್ಪವು ನೋಡ
ಗಿರಿ ಕೆಲಕೆ ಸಾರ್ದು ಕೈವಟ್ಟಿಗೊಡುವವು ನೋಡ
ಹುಲಿ ಹುಲ್ಲೆ ನಕುಲನಹಿ ಸಿಂಹವಾನೆಗಳಲ್ಲಿ
ಕುಲವೈರಮುಂ ಬಿಟ್ಟು ಸಿಂದು ನೋಡುವವಲ್ಲಿ
ಸಂತಸದೊಳಲ್ಲಮುಂ ನಲಿದಾಡಿ ಬರುತಮಿರೆ
ಕಂತುಹರನವತಾರದಂತೆ ನಡೆತರುತಮಿರೆ
ಕರತಳದ ಸಿಂಹಾಸನದೊಳಿರ್ಪ ಲಿಂಗಕ್ಕೆ
ಚರಿತದಿಂ ವನದೇವತೆಯರೇಳ್ದು ಪೈಯಿಕ್ಕೆ

ನುತಭೂತವೆಳೆದಳಿರು ಹೀಲಿ ದಳವಿಡಿದು ಬರೆ
ಲತೆ ಪುಷ್ಪ ಮಂಜರಿಯ ಚಾಮರವನಿಕ್ಕುತಿರೆ

ಶಿವಲಿಂಗರಾಜ್ಯಸುಖದೊಳಗಿರ್ದನಲ್ಲಮಂ
ಭವನ ಕರುಣಾಲೋಕನದೊಳಿರ್ದನಲ್ಲಮಂ
ಇರುತೆ ಲಿಂಗಕ್ಕೆ ನೋಟದೊಳೆ ಮಜ್ಜನಕೆರೆದು
ಅರಳ್ದ ನೇತ್ರದ ಪೂವಿನಿಂ ಪೂಜೆಯಂ ಮೆರೆದು
ನರು ಸೂರ್ಯ್ಯ ಕಂಪಿಂದೆ ನವ ಧೂಪವಂ ಕೊಟ್ಟು
ನೆರೆ ಮನದ ಬೆಳಗಿನಾರ ತಿಯೆತ್ತಿ ಪೊಡೆವಟ್ಟು
ಸಿಟ್ಟಿಯಿಂ ನೇಹಮುಮನಾರೋಗಿಸಲ್ಕೊಟ್ಟು
ಕಟ್ಟಿಕ್ಕರಚಲನಾನಂದಮುಂ ಮುಂದಿಟ್ಟು
ಸಕಲ ಸುಖಮುಂ ಕಣ್ಗಳಿಂದೆ ಕೈಗೂಡುತುಂ
ಸಕಲ ಭೋಗಂಗಳಂ ನೋಟದಿಂ ದೀವುತುಂ

ತರು ನಿಕಾಯದ ಕೋಟರಂಗಳೊಳಗಲ್ಲಮಂ
ಗಿರಿಕುಳದ ಗಹ್ವರಂಗಳೊಳೆಲ್ಲವಲ್ಲಮಂ
ಪರಿವ ನಿರ್ಜರ ತರ ತರಂಗಿಣಿಯೊಳಲ್ಲಮಂ
ನೆರೆದ ನುಣ್ಮಳಲ ಪುಳಿನಂಗಳೊಳಗಲ್ಲಮಂ
ಚಂದ್ರಕಾಂತದ ಶಿಲೆಯ ತಂಪಿನೊಳಗಲ್ಲಮಂ
ಇಂದ್ರನೀಲದ ಮಣಿಶಿಲಾತಳದೊಳಲ್ಲಮಂ
ಪರಿಮಳದ ಚಂದನದ ತರುಗಳೊಳಗಲ್ಲಮಂ
ಮರುಗ ಸುರ ಹೊನ್ನೆ ಸೇವಂತಿಯೊಳಗಲ್ಲಮಂ
ಸಂಪಗೆಯೊಳಿಡಿದ ಹೂವಿನ ಹಸೆಯೊಳಲ್ಲಮಂ
ಸೊಂಪೆಸೆವ ಕೆಂದಳಿರ ತಾಣದೊಳಗಲ್ಲಮಂ
ಮಾಮರದ ಮಾಧವಿಯ ಮಂಟಪದೊಳಲ್ಲಮಂ
ತಾವರೆಯ ತಣ್ಣೆಳಲ ತಿಳಿಗೊಳದೊಳಲ್ಲಮಂ
ಮಲ್ಲಿಗೆಯ ಮಾಲತಿಯ ಹೊದರಿನೊಳಗಲ್ಲಮಂ
ಮೊಲ್ಲೆ ಇರವಂತಿಗೆಯ ಮೊತ್ತದೊಳಗಲ್ಲಮಂ

ತರುಗಳೊಳನಂತ ದಿನವಿರುತಿರ್ಪನಲ್ಲಮಂ
ಗಿರಿಗಳೊಳನೇಕ ಮಾಸದೊಳಿರ್ಪನಲ್ಲಮಂ

ನದಿಗಳೊಳನೇಕ ವತ್ಸರವಿರ್ಪನಲ್ಲಮುಂ
ಹೊದರಿನೊಳು ಸಿಲ್ಕಿ ಸಿಂದಿರುತಿರ್ಪನಲ್ಲಮುಂ
ಶಿವನನೋಳ್ಪಂತೆಲ್ಲವಂ ನೋಳ್ಪನಲ್ಲಮುಂ
ಭವನೊಳಗೆ ಇರುತೆಲ್ಲದೊಳಗಿರ್ಪ ನಲ್ಲಮುಂ

ಎಲ್ಲಿರ್ದನಲ್ಲಿಯೇ ಸಂತೋಷಮುಯ ನೋಡ
ಎಲ್ಲಿರ್ದನಲ್ಲಿ ದಿವ್ಯಕ್ಷೇತ್ರಮುಯ ನೋಡ
ಇಂತು ಶಿವಲಿಂಗವೆಂತಿರಿಸಿದಂದದೊಳಿರುತೆ
ಸಂತತಂ ಶಶಿಧರಂ ಬರಿಸಿದಂದದೆ ಬರುತೆ

ಬರುತೆ ಬಸವಣ್ಣನಂ ಕಂಡು ಮಾತಾಡುತುಂ
ಹರನ ನಿಲವಿನ ಪರಿಯನೊಲ್ಮೆಯಿಂ ತೋರುತುಂ
ನಡೆತಂದು ಚೆನ್ನ ಸೊನ್ನಲಿಗೆ ಪುರಕೈತಂದು
ಮೃಡಮೂರ್ತಿ ಸಿದ್ಧರಾಮನನರಿದು ಸಾರ್ತಂದು
ಕಲಿಯುಗಂ ಪೊಲ್ಲೆಂದು ಬುದ್ಧಿಯಂ ಪೇಳುತುಂ
ಸಲೆ ಸಮಾಧಿಗೆ ಪೋಗೆನುತ್ತಿಚ್ಛೆದೋರುತುಂ
ಶ್ರೀಪರ್ವತಾಭಿಮುಖನಾದನಲ್ಲಮದೇವ
ಆ ಪರ್ವತಂ ಮುಟ್ಟೆ ಬಂದನಲ್ಲಮದೇವ

ಆದರೊಳಗೆ ಕೈಕಾಲ್ಗಳುಳ್ಳ ಸರ್ಪಂಗಳುಂ
ಮುದದಿಂದೆ ಮಾತಾಡುತಿರ್ಪ ವೃಕ್ಷಂಗಳುಂ
ನಡೆವ ಗಿಡುಗಳುಮಷ್ಟವದನದ ಮೃಗಂಗಳುಂ
ಆಡಿಗಡಿಗುರಿವುತಿರ್ಪ ದಿವ್ಯೌಷಧಂಗಳುಂ
ಹಾಡುವ ಲತಾವಳಿಗಳುಂ ಸುಳಿವ ಕಲ್ಗಳುಂ
ನೋಡುವಚಲಂಗಳುಂ ರೆಕ್ಕೆಯ ಗಜಂಗಳುಂ
ಸೊಗಯಿಸುವ ದನಿಯಿಂದಲೆಸೆವ ಪಲಗುಹೆಗಳುಂ
ಒಗೆಗಳಂ ಕೊಡುತಿಪ್ಪ ಚೂತ ವೃಕ್ಷಂಗಳುಂ
ಇವು ಮೊದಲನೇಕದ್ಭುತಂಗಳಂ ನೋಡುತುಂ
ಶಿವನನೋಡುವೆನೆನುತೆ ಕೌತುಕದಳಾಳುತುಂ

ಕದಳೀವನಕ್ಕೆ ನಡೆಗೊಂಡನಲ್ಲಮದೇವ
ಆದಿರದ ಮಹಾ ಮಹಿಮ ಸಿದ್ಧನಲ್ಲಮದೇವ

ಅಲ್ಲಿ ಬರುತಿರೆ ಭೈರವಂ ಕಂಡು ಕೈಮುಗಿದು
ಅಲ್ಲಮಂ ಕಾರಣಿಕನೆಂದು ಮನದೊಳಗರಿದು
ತೋರಿದಂ ಶಿವನಲ್ಲಿಗೊಯ್ವ ಸೈವಟ್ಟೆಯಂ
ಮೀರಿ ಬರಲಲ್ಲಮಂ ಸಂಸೃತಿಯ ಕಟ್ಟೆಯಂ
ಮುರಿದಿರ್ದ ಹಾವುಗಳ ಬಳ್ಳಿಯಂ ದಾಂಟುತುಂ
ಘುರಿಘುರಿಲನರಿವ ಬಾಳಿಗಳನಲ್ಲಾಡುತುಂ
ನೆರೆದಿರ್ದ ವಿಷಕನ್ನಿಕೆಯರ ನೆರೆ ಸೋಂಕುತುಂ
ಪರಿವ ನಂಜಿನ ಗಾಳಿಗೆಳಸಿ ಮೆಯ್ಯೊಡ್ಡುತುಂ
ಉರಿಯ ಹಳ್ಳಂಗಳಂ ಹರುಷದಿಂ ದಾಂಟುತುಂ
ಉರವಣಿಪ ಭೂತವೇತಾಳರಂ ನಿಲಿಸುತುಂ
ನಿಂದು ತಪವಿರ್ದ ಹನುಮಂತನಂ ನೋಡುತುಂ
ಬಂದೊಡ್ಡಿದಾಯುಧಂಗಳನೊಡೆದು ಮುರಿವುತುಂ
ಮಾನಿಸರ ಮೋರೆಯಾನೆಯ ದೇಹದವರ್ಗಳಂ
ನಾನಾ ವಿಧದ ಕೆಯ್ಯ ಕಾಲ ಕಣ್ಣವರ್ಗಳಂ
ಗಾವುದಗಲದ ನೀಳಮಿರ್ಪ ಪೇರಿರುಂಪೆಯಂ
ಸಾವಿಲ್ಲದಿರ್ಪ ಸಿದ್ಧರ ಚೆಲ್ವ ಮೂರ್ತಿಯಂ
ನೊಡುತುಂ ಪರಿವ ಕೆಂಡದ ತೊರೆಯನುತ್ತರಿಸಿ
ಕೂಡೆಯುರಳಿರ್ದ ವಿಷದ ಪುಷ್ಪವನು ವಾಸಿಸಿ
ಪೇಳೆ ಪವಣಿಲ್ಲದದ್ಭುತಮುಮಂ ಕಾಣುತುಂ
ಪೇಳಬಾರದ ಭಯಾನಕಮುಮಂ ಕಾಣುತುಂ
ಪೊಸತೆನುತ್ತಲ್ಲಮಪ್ರಭು ನಡೆದು ಬರುತಿರ್ದ
ಅಸಮಾಕ್ಷನಪರಾವತಾರ ನಡೆತರುತಿರ್ದ

ಇಂತು ಬರೆವರೆ ಕಾಣಲಾಯ್ತು ಕೈಲಾಸವದು
ಶಾಂತಾರ್ಕ ಕೋಟಿ ಕಿರಣಂಗಳಂ ಬೆಳಗುತದು
ಶಶಿಯ ತಾಯ್ಮನೆಯಂತೆ ಇರ್ದುದಾ ರಜತಗಿರಿ
ಪೆಸರೆಸೆವ ಪುಣ್ಯದಂತಿರ್ದುದಾ ಅಭವಗಿರಿ
ಆ ಗಿರಿಗೆ ಸಾಲ್ಗೊಂಡ ಸುರರ ಸಂದಣಿಯೊಳಗೆ
ನಾಗೇಂದ್ರರಮರೇಂದ್ರರೆಸೆವ ತಿಂಥಿಣಿಯೊಳಗೆ
ಕಿನ್ನರರ ಖೇಚರರ ಸಿದ್ಧರೊತ್ತೊತ್ತೆಯೊಳು

ಪನ್ನಗರ ಗಂಧರ್ವಕುಲದ ನಡುವಣ್ತಿಯೊಳು
ಹರನೋಲಗದ ಸಿರಿಯು ಬಾಗಿಲ್ಗೆ ನಡೆತಂದು
ಹರಿಯಜ ಸುರಾವಳಿಯು ಸಂದಣಿಯೊಳಂ ನಿಂದು
ಬರುತಿರಲ್ದೂರದಿಂದಲ್ಲಯ್ಯನಂ ಕಂಡು
ಹರನಿತ್ತ ಬಾಯಿತ್ತ ಬಾ ಯೆನುತೆ ಕೈಕೊಂಡು
ಕರೆಯೆ ಲಿಂಗದ ನೋಟವಚ್ಚಳಿಯದೆ ಯಂದು
ಹರುಷದಿಂ ಹರನ ಭವನದ ಮಧ್ಯದೊಳ್ನಿಂದು
ಮೆಯ್ಯಿಕ್ಕಲೆಂದಲ್ಲಮಂ ಕೊಂಕಿ ಬಾಗುತಿರೆ
ಕೆಯ್ಯ ಲಿಂಗಂ ಸಹಿತವಾಗದೆಂದೆನುತಮಿರೆ
ಹರನ ಚರಣಕ್ಕೆರಗಿ ಕುಳ್ಳಿರ್ದನಲ್ಲಮಂ
ಪರಮೇಶ್ವರಂ ಕೌತುಕಂ ಬಡುತ್ತೆಲ್ಲಮಂ
ಕೇಳ್ದು ನೆರೆ ಹೋದ ಬಂದಾದ ವೃತ್ತಾಂತಮಂ
ತಾಳ್ದು ಮನದೊಳಗಕ್ಕರಿಂದೆ ಸಂತೋಷಮಂ
ಮುನ್ನಿನಂದದೊಳೆ ನಿರ್ಮಾಯಮೆಸರಂ ಸಲಿಸಿ
ಮನ್ನಿಸುತ್ತಲ್ಲಿ ಗಣಪದವಿಯೊಳು ನೈತಿರಿಸಿ
ಶಿವನ ಸಾರೂಪ್ಯದಿಂದೊಪ್ಪಿರ್ಪನಲ್ಲಮಂ
ಭವನ ಸುಪ್ರಭೆಯೊಳಗೆ ಸಂದಿರ್ದನಲ್ಲಮಂ
ನಿರುಪಾಧಿಕ ಜ್ಯೋತಿಯೊಳಗಿರ್ದನಲ್ಲಮಂ
ಪರಮ ತತ್ವಾಕಾರನಾಗಿರ್ದನಲ್ಲಮಂ
ಇಂತು ಭಕ್ತರ ಪುಣ್ಯಲೀಲೆಯಂ ನೋಡುತುಂ
ಸಂತತಂ ನತಜನಮನೊಲ್ದು ಕೊಂಡಾಡುತುಂ
ಕಾಮ ಕಾನನ ದವಾನಲ ರೂಪನೊಪ್ಪಿದಂ
ಸೋಮ ಸೂರ್ಯಾಗ್ನಿ ನೇತ್ರತ್ರಯನು ಪೊಪ್ಪಿದಂ
ಗಿರಿಜಾ ಮುಖಾಬ್ಜ ಭಾಸ್ಕರ ರೂಪನೊಪ್ಪಿದಂ
ಗುರುಮೂರ್ತಿ ಹಂಪೆಯ ವಿರೂಪಾಕ್ಷನೊಪ್ಪಿದಂ ॥

**ಕಂದ**॥ ಧರೆ ಬೆರಗಾಗಲ್ಸುರಕಲ್ಪ। ಮರಿದೆನುತಿರಲಲ್ಲಮಯ್ಯನಂ ಮೆರೆದ ಮಹೇ॥ಶ್ವರ ನೊಲ್ದು ಭಕ್ತಿಯಿಂ ಸಾ। ದರದಿಂವೆನಗೀಗಿರ್ಕೆ ಹಂಪೆಯ ವಿರೂಪಾಕ್ಷಂ॥

# ರೇವಣಸಿದ್ಧೇಶ್ವರನ ರಗಳೆ.

**ಕಂದ॥** ತ್ರಿಣಯನನ ಪ್ರತಿಮನಕಾ। ರಣಿಕಂ ತಾಂನೊಲ್ದಿಪ್ಪ ಹಂಪೆಯ ವಿರೂಪಾಕ್ಷಂ ॥ ಗುಣರಹಿತಂ ಪೊರೆದಂ ರೇ। ವಣಸಿದ್ಧನಂಬುನಿಧಿ ಪರಿತಾಪನಿಯೊಳ್ ॥

## ರಗಳೆ

ಶ್ರೀ ರಜತ ಗಿರಿಯ ಸಭೆಯೊಳ್ ಚಂದ್ರಶೇಖರಂ
ಕಾರುಣ್ಯನಿಧಿ ಹಂಪೆಯರಸನೊಪ್ಪಿರೆ ಕರಂ
ನಂದೀಶ ವೀರಭದ್ರಾದಿ ಗಣತತಿಯೊಪ್ಪೆ
ಸಂವಣಿಪ ದಾರುಕಂ ರೇಣುಕಾದಿಗಳೊಪ್ಪೆ
ದೇವ ಗಂಧರ್ವ ಕಿನ್ನರ ಗರುಡಗಣವೆಸೆಯೆ
ಆವಗಂ ಸುರಪತಿ ಸುರಾಸುರರುಗಳುಮೆಸೆಯೆ
ಆ ಸಮಯದೊಳ್ಶಂಭು ಸಂತಸದೊಳೋಲಾಡಿ
ಭಾಸುರಮೆನಿಪ್ಪ ರೇಣುಕನ ಮೊಗಮಂ ನೋಡಿ
ಕರುಣದಿಂ ಬಾಯ ತಂಬುಲವನೀಯಲ್ಕೆಂದು
ಕರೆಯೆ ಭಯಭಕ್ತಿಯಿಂ ದೇವ ಬರ್ದುಕಿದೆನೆಂಪು
ಸಡಗರಿಸುತಂ ದಾರುಕನನಲ್ಲಿಂ ದಾಂಟಿ ಬರೆ
ಮೃಡನೀಕ್ಷಿಸುತ್ತಂ ಪ್ರಸಾದಮುಮನಿಕ್ಕುತಿರೆ
ದಾರುಕಂ ದುಮ್ಮಾನವನೊಳಕೊಂಡು ತಲೆವಾಗೆ
ಮಾರಾರಿ ಬೆಸಸುತಿರ್ದಂ ಸುರರ್ಬೆರಗಾಗೆ
ದಾರುಕನನಿಂತು ದಾಂಟುವರೆ ರೇಣುಕ ನಿನಗೆ
ಧಾರುಣಿಯೊಳೊಗೆವ ಜಡ ಜನ್ಮವಾದುದು ನಿನಗೆ
ಎನೆ ರೇಣುಕಂ ಬೆಚ್ಚಿ ಕೈಗಳಂ ಮುಗಿವುತುಂ
ಮನಸಿಜಹರಂಗೆ ಬಿನ್ನೈಸಿದಂ ನಡುಗುತುಂ
ದೇವ ಜಡಯೋನಿಯೊಳ್ಪರಲಾರ್ಪೆನೇ ತಂಪೆ
ಆವಗಂ ಸಂಸೃತಿಯೊಳಿರಲಾರ್ಪೆನೇ ತಂದೆ
ಶಂಭುವೇ ಶಂಕರನೆ ಶಶಿಧರನೆ ಕರುಣಿಪುದು
ಜಂಭಮರ್ದನಮುಕುಟ ಲಸಿತಪದ ಪಾಲಿಪುದು

ಎಂದು ಬಿನ್ನೈಸಲರಿದೀಶ್ವರಂ ನಸುನಗುತೆ
ಎಂದನಾ ರೇಣುಕಂಗಳ್ಕರಿಂ ಕರುಣಿಸುತೆ
ಎನ್ನ ಪ್ರಸಾದಕ್ಕೆ ಬರ್ಪುದಿದು ತಪ್ಪಲ್ಲ
ಮನ್ನಿಸದೆ ದಾರುಕನನಿಂತು ದಾಂಟಿದೆ ಪೊಲ್ಲ
ಇವರಿಂದೆ ಸುಖದುಃಖಮಂ ಧರಣಿಯೋಳ್ಪೊತ್ತು
ಸಡಮುಳವೆನಿಪ್ಪ ಲಿಂಗದೊಳೆ ಜನನಂಬೆತ್ತು
ಸುಖದುಃಖವಲ್ಲಿ ಸಾಮರ್ಥ್ಯತರವಾಗುತಿರೆ
ಸುಖದೊಳಿರ್ದಿಲ್ಲಿಗೈತಪ್ಪುದೆಂದೆನುತವಿುರೆ

ರೇಣುಕಂ ಕೈಮುಗಿದು ಬೆಸನಮಂ ಕೈಕೊಂಡು
ವಾಣೀಶ ಮಸ್ತಕ ಕರಾಬ್ಜನಂ ಬೀಳ್ಕೊಂಡು
ಬಂದು ಧರೆಯೊಳಗೆ ಪುಟ್ಟಿದ ಪರಿಯುನರಪುವೆಂ
ಇಂದುಜೂಟಂ ಪ್ರೇರಿಸಿದ ತೆರದಿ ತಿಳುಪುವೆಂ
ಎಂತೆಂದೊಡಂಬುಧಿಪರೀತ ವಸುಮತಿಯೊಳಗೆ
ಸಂತತಂ ರಂಜಿಪುದು ಶಿವಭಕ್ತಿ ತೊಳತೊಳಗೆ
ಕೊಲ್ಲಿಪಾಕಿ ಯೆನಿಪ್ಪ ಪೆಸರೆಸೆವ ಶಿವಪುರಂ
ಬಳ್ಳಿವರಿದೀಶ್ವರನ ಭಕ್ತಿ ಪರ್ವಿದ ಪುರಂ
ಅಲ್ಲಿ ಬಂದೊಲಿದು ನೆಲಿಸಿರ್ಪನಹಿಭೂಷಣಂ
ಎಲ್ಲಾ ಮಹೇಶ್ವರರ ಭವಬಂಧ ಶೋಷಣಂ
ಅಮೃತಮಯನನುಪಮಂ ಸೋಮನಾಥಂ ನೋಡ
ಅಮೃತಕಳಾಕಳಿತ ಚಂದ್ರಚೂಡಂ ನೋಡ

ಆ ಸೋಮನಾಥನ ಶಿವಾಲಯದ ನಡುವೊರ್ಪ
ಭಾಸುರದ ಶಿವಭಕ್ತ ಕೋಟಿ ಕುಳ್ಳಿರೆ ಪೆರ್ಪ
ವಡೆದ ಕವಿಗಮಕಿವಾಗ್ಮಿಗಳ ತಂಡಂ ಮೆರೆಯೆ
ನಡುವೆಸೆದಮಳ ರಸಾಂತರ ಮೊತ್ತದಿಂದೆಸೆಯೆ
ನೆರೆ ಮುಗ್ಧೆಯರ ವಿದಗ್ಧೆಯರ ತಿಂಥಿಣಿಯೊಪ್ಪೆ
ಮೆರೆವ ಬಹು ವಿಧ ಕಳಾವಿದರ ಪಂಙ್ತಿಗಳೊಪ್ಪೆ
ಪ್ರೀತಿಸುತಂ ನಲಿದು ಕುಳ್ಳಿರ್ಪ ಸಮಯದೊಳು
ಲೀಲೆ ಕೈಮಿಗೆ ರಂಗಮಂಟಪದ ಮಧ್ಯದೊಳು

ಪಿಡಿದ ಜವನಿಕೆ ಸಿರಿಯೆ ಸಕಲ ವಾದ್ಯಂ ನೆಗಳೆ
ನಡುವೆ ನೃತ್ಯದ ಲಲನೆಯಾಡುತ್ತಮಿರೆ ಪೊಗಳೆ
ಆಗಳೊಗೆದುದು ಮಹಾಲಿಂಗದೋಳ್ಘನ ರವಂ
ರಾಗದಿಂದಿರ್ದ ಸಭೆ ನಡುಗುತ್ತಮಿರೆ ಕರಂ
ನೆಲ ನೊಳಗಿದಂಡದಿಂ ಮೇಘ ಗರ್ಜನೆಯಂತೆ
ಸಲೆ ಲಿಂಗದೊಳಗಣಿಂ ಪೊಣ್ಮುತ್ತಮಿರಲಿಂತೆ
ಪುಟ್ಟುತಿರ್ದಂ ಸಿದ್ಧರೇಣುಕಯ್ಯಂ ನೋಡ

ನಿಷ್ಠೆ ಮಿಗೆ ಸಿದ್ಧರೇವಣ ನಾಮದಿಂ ನೋಡ
ಅದೆ ಕಂಥೆಯದೆ ವದನವದೆ ವಜ್ರಕುಂಡಲಂ
ಅದೆ ವಕ್ತ್ರವದೆ ಹಸ್ತವದೆ ಪಿಡಿದ ಲಾಕುಳಂ
ಅದೆ ಕೋವಣಂ ನೋಡೆನುತ್ತ ಮಿರಲುದಿಸಿದಂ
ಸದಮಳವೆನಿಪ್ಪ ಶಿವಲಿಂಗದೋಳ್ಪುಟ್ಟಿದಂ
ಲೋಕಮಂ ಪಾವನಂ ಮಾಡುವುದ್ಯೋಗದಿಂ
ಆಕಸ್ಮಿಕಂಗಳಂ ತೋರುವನುರಾಗದಿಂ
ಭಸಿತದಿಂ ನೊಸಲ ಕಣ್ಣಂ ಮುಸುಂಕಿಟ್ಟಲ್ಲಿ
ಎಸೆವೆರಡು ಕಣ್ಗಳಿಂ ಬೆಳಬೆಳಗುತಂತಲ್ಲಿ
ಜ್ಯೋತಿಯಿಂದಂ ಜ್ಯೋತಿಯೊಗೆದೊಂದು ತೆರನಾಗೆ
ಓತು ಪುಟ್ಟಿದನಯ್ಯ ನಿಜವಿಳೆಗೆ ಪೊಸತಾಗೆ
ಕಾರಣಿಕಂ ಸಿದ್ಧನಂ ನೋಡಲಮ್ಮದೆ ಕರಂ
ಓರಂತೆ ವೈಯ್ಯಿಕ್ಕುತಿರ್ದುದಾ ಪರಿಕರಂ
ಕೈಮುಗಿದು ಜನವೆಲ್ಲ ನಡನಡನೆ ನಡುಗುತಿರೆ
ಆ ಮಹಾಸಿದ್ಧನಿರವಿಂಗೆ ಬೆರಗಾಗುತಿರೆ
ಮಿಗೆ ನೋಡೆ ನೋಡೆ ನಡೆತಂದಂ ನಭಸ್ಥಳಕೆ
ಬಗೆಗೊಂಡು ಬಂದನಾ ದಕ್ಷಿಣ ದಿಶಾವರಕೆ
ಬಂದನಗಸ್ತ್ಯನ ಕೂಡೆ ಶಿವಭಕ್ತಿ ಗೋಷ್ಠಿಯೊಳು
ನಿಂದು ಪುಳುಕಿಸುತೆ ಪೊರಮುಟ್ಟಿ ಕಡುನಿಷ್ಠೆಯೊಳು
ಸೇತುವಿನ ರಾಮನಾಥನ ನೊಲ್ಮೆಯಿಂ ಕಂಡು
ಆತುರದೊಳಪ್ಪಿ ಹಾರೈಸಿ ಹರುಷಂಗೊಂಡು
ಆರುವರಿಯದ ತೆರದಿ ನೆರೆ ಕಂಥೆಯಂ ಪೊದೆದು

ಊರೂರ ಪೊರಗೊಳಗೆ ಮರುಳಂದದಿಂ ಸುಳಿದು
ಪಿಣ್ಣಾಂಕನೊಲ್ಮೆಯಿಂ ಮೆಲುತಿರ್ಪ ದೂಸರಿಂ
ಪಿಣ್ಣಾಂಕ ದೇವನೆಂಬುವ ನಾಮವಕ್ಕರಿಂ
ಚೋಳ ದೇಶದೊಳೆಲ್ಲ ಸಂದಿರೆ ನಿರಂತರಂ
ಕೂಲಿಯಣುಗಂ ಲೋಕವಂ ನಗುತ್ತಿರೆ ಕರಂ
ಲೋಕಕ್ಕೆ ತಾ ಮರುಳು ತನಗೆ ಲೋಕಂ ಮರುಳು
ಲೋಕದೊಳ್ಳ ಜನರ್ಗೆ ಶಿವನ ತತ್ವದ ಪುರುಳು
ತಾನಾಗಿ ಸುಳಿವುತಿರ್ದಂ ಸಿದ್ಧರೇವಣಂ
ನಾನಾ ವಿಧದ ಮಹಿಮೆಗಳನರಿವ ಕಾರಣಂ
ತಿಲದ ತೈಲದ ತೆರದಿ ಕಾಷ್ಠದಗ್ನಿಯ ತೆರದಿ
ಜಲದ ಜಲಜದ ತೆರದಿ ಕುಸುಮಗಂಧದ ತೆರದಿ
ಸ್ಥೈರ್ಯದೊಳ್ ಗಿರಿಯಂತೆ ತಂಪಿನೊಳ್ ಶಶಿಯಂತೆ
ಶೌರ್ಯದೊಳ್ ರವಿಯಂತೆ ಉಷ್ಣದೊಳ್ ಶಿಖಿಯಂತೆ
ಭರಿತದೊಳ್ ನಭದಂತೆ ಸೋಂಕಿನೊಳನಿಲನಂತೆ
ಚರಿತದೊಳ್ ಭುವನ ಪಾವನ ದೇವನದಿಯಂತೆ
ಮೂರ್ತಿಯುಂ ಪೊರ್ದನೀ ಜಗದ ಸಂಸಾರಮಂ
ಸಾರ್ದ ಸಾರಂ ನೋಡ ಭವಕುಲದ ಭಾರಮಂ
ಇಂತು ನಿರ್ಲೇಪ ಚಾರಿತ್ರದಿಂ ಸುಳಿವುತುಂ
ಸಂತತಂ ತನ್ನನರಿದವರಘವ ನಿಳಿಪುತುಂ
ದ್ರವಿಡದೇಶದ ಶಿವಪುರಂಗಳಂ ನೋಡುತುಂ
ಶಿವಲಿಂಗಸಂತತಿಗಳಂ ಪೂಜೆಗೈವುತುಂ

ಪೊನ್ನಾಂಬಲವನೈದಿ ನಾಟ್ಯರೂಪಂ ಕಂಡು
ಪನ್ನಗಾಭರಣ ನಾಟ್ಯಕ್ಕೆ ಹರುಷಂಗೊಂಡು
ನಡೆದು ಕಾಂಚೀ ಪುರದೊಳೇಕಾಂಬ್ರನಾಥನಂ
ಕಡು ನಿಷ್ಠೆಯಿಂ ಕಂಡು ಪಾರ್ವತೀ ಪ್ರಿಯನಂ
ಒಲುಮೆಯಿಂ ಪೂಜಿಸುತೆ ಲೋಕೈಕ ಬಂಧುವಂ
ಅಲ್ಲಿ ಶಿವನಿಳಯದೊಳು ಮರುಳಂತೆ ಸುಳಿವುತುಂ
ಬಲ್ಲ ಶಿವಭಕ್ತರ್ಗೆ ಶಿವನಂತೆ ಪೊಳೆವುತುಂ
ದೇವಲೋಕದ ಕಂಪಿಯ ಮಲ್ಲಿಗೆಯ ಪುಷ್ಪಂದೆ

ಆವಗಂ ನಾಗಲೋಕದ ಕುಸುಮ ಕುಲದಿಂದೆ
ಏಕಾಂಬ್ರನಾಥನಂ ಒಲುಮೆಯಿಂ ಪೂಜಿಸುತೆ
ಲೋಕೈಕ ಬಂಧುವಂ ಪೂಜಿಸಿ ವಿರಾಜಿಸುತೆ
ಆ ಪುರಕೆ ಪಿಣ್ಣಾಂಕನೆಂಬ ನಾಮಂ ಸಂದು
ಪಾಪಹರನಲ್ಲಿ ಕೆಲವುಂ ದಿವಸವಿರೆ ಸಂದು

ಅಲ್ಲಿ ವೈಷ್ಣವನೆನಿಪ ನೋರ್ವ ಚೋಳಂ ಬಂದು
ಎಲ್ಲ ತೆರದಿಂದೆ ವಿಷ್ಣು ಪ್ರತಿಮೆಯ ತಂದು
ಇದು ಬಗೆವೊಡೊರ್ಮೆಯುಂ ಬಾಯ್ದೆರೆದು ನುಡಿವಂತೆ
ಸದಮಳಂ ಹರಿಕಳಾಸಾನ್ನಿಧ್ಯವಪ್ಪಂತೆ
ವಿಷ್ಣು ಪ್ರತಿಷ್ಠೆಯಂ ಮಾಡಬಲ್ಲಗ್ಗಳಂ
ವೈಷ್ಣವ ಪ್ರತತಿಯೊಳು ಪಿರಿಯರಪ್ಪವರ್ಗಳಂ
ಅರಸುತಾ ದೇಶದೊಳು ಪಡೆಯದೆ ಮೊಗಂ ಬಾಡಿ
ಅರಿಕೆಯಂ ಮಾಳ್ಪರಿಲ್ಲದೆ ಚಿತ್ತವಲ್ಲಾಡಿ
ಐದೆ ಮಿಕ್ಕನುತಾಪದಿಂದೆ ಚಿತ್ತಂ ಸೆಡೆದು
ಸುಯ್ಯು ಸುಮ್ಮಾನ ಉಡುಗುತೆ ಚೋಳನುಂ ನೆನೆದು
ವೃಡನ ಮರೆಹೊಕ್ಕಲ್ಲದೀ ಕಾರ್ಯವಾಗದಿದು
ವೃಡಭಕ್ತರಿಂದಲ್ಲದಾರೊಳುಂ ತೀರದುದು

ಎಂದು ನಡೆದೇಕಾಂಬ್ರನಾಥನಲ್ಲಿಗೆ ಬಂದು
ಇಂದುಧರ ಪಾಪಹರ ಪುಣ್ಯವರ ಶರಣೆಂದು
ಪಂಚಾಮೃತಾಭಿಷೇಕಂಗಳನಲಂಕರಿಸಿ
ಪಂಚವದನಂಗೆ ಪೊಸ ಪೂಜೆಗಳನಳವಡಿಸಿ
ದೇವಾನ್ನ ದಿವ್ಯಾನ್ನದಾರೋಗಣೆಯನಿತ್ತು
ದೇವಂಗೆ ಹೊನ್ನ ರನ್ನದ ತೊಡಿಗೆಗಳನಿತ್ತು
ಮಕರ ತೋರಣ ಸುವರ್ಣ ತೋರಣವನೆತ್ತಿ
ಸುಕರವೆನಿಸುವ ಮೌಕ್ತಿಕದ ತೋರಣವನೆತ್ತಿ
ಶಿವಭಕ್ತ ಸಂಕುಲಕ್ಕಾರಾಧನೆಯನಿತ್ತು
ಶಿವನ ನೆನಹಂ ತನ್ನ ಮನದ ಮೊನೆಯೊಳು ಪೊತ್ತು
ಸರ್ವಜ್ಞನೆನಿಪನಂ ಕರುಣಿಸುವುದೆಲೆ ದೇವ
ಸರ್ವ ಸಾಮರ್ಥ್ಯವುಳ್ಳಧಿಕನಂ ಕೊಡು ದೇವ

ಎನುತಲತಿ ಶುಚಿರ್ಭೂತನಾಗಿ ಮಿಗೆ ಪಟ್ಟಿರೆ
ಮನದೊಳಗೆ ಸಹಜ ಸಾಮರ್ಥ್ಯನಂ ನೆನೆವುತಿರೆ

ಕನಸಿನೊಳಗೇಕಾಂಬ್ರನಾಥನಲ್ಲಿಗೆ ಬಂದು
ನೆನೆವ ಚೋಳನ ಮನದ ಮೊನೆಯ ಕೊನೆಯೊಳು ನಿಂದು
ತಿಣ್ಣವಿಲ್ಲಂ ಕಜ್ಜವಿಂತಿದಕ್ಕಿಸಿತೇಕೆ
ಪಿಣ್ಣಾಂಕದೇವನಂ ತರ್ಪುದುಮ್ಮಳವೇಕೆ
ಎಂದಲ್ಲಿ ಬೆಸಸಿ ಬಿಜಯಂಗೈಯ್ಯೆ ರಾಗದಿಂ
ಮುಂದೆಯರುಣೋದಯಂ ತೋರೆ ಕಡುವೇಗದಿಂ
ನಿದ್ರೆಯಿಂದೆಚ್ಚತ್ತು ಚೋಳ ಮನದೊಳಗರಿದು
ರುದ್ರಂಗೆ ಭಯಭಕ್ತಿಯಿಂದೆರಗಿ ಕೈ ಮುಗಿದು
ತಿರುಗಿ ತನ್ನರಮನೆಯನಾನಂದದಿಂ ಪೊಕ್ಕು
ಹರನ ಕರುಣಕ್ಕೆ ಹಾರೈಸುತಂ ಮನ ಮಿಕ್ಕು
ಕಂಚಿಯೊಳು ಪಿಣ್ಣಾಂಕ ದೇವರೆಂಬವರುಂಟೆ
ಪಂಚಮುಖನರುಪಿದಂ ನೋಡಿ ಪುರದೊಳಗುಂಟೆ
ಎನೆ ದೇವ ಪಿಣ್ಣಾಂಕನೆಂಬನೋರ್ವಂ ಮರುಳ
ತನತನಗೆ ಪುರದ ಗುಂಡುಗಳುರುಳ್ವ ನೆರೆ ಮರುಳ
ಉಂಟೆಂದೊಡಾತನೇ ಪಿರಿಯಂ ಕರೆಯಿಮೆನಲ್
ಟೆಂಟಣಿಸುತೆಲ್ಲರುಂ ಪೋಗಿ ಕರೆಯುತ್ತಿರಲ್

ಆನೇಕೆ ಚೋಳನೇಕೆತ್ತಣ ವಿನೋದವಿದು
ಆನೋರ್ವ ಭಿಕ್ಷುಕಂ ನೃಪಸಂಗವೆತ್ತಣದು
ಬಾರೆನೆಂತುಂ ಬಾರೆನೆನೆ ಮರಳಿ ಪರಿತಂದು
ಬಾರನಾವರ್ತದಿಂ ದೇವ ಬೆಸನೇನೆಂದು
ನುಡಿಯೆ ಬಲ್ಪಿಂ ಕೊಂಡು ಬರ್ಪುದೆಂದೆನುತಮಿರೆ
ನಡೆತಂದು ಬಲ್ಲಾಳ್ಗಳೆಲ್ಲರಂ ಕರೆವುತಿರೆ
ಒಲ್ಲೆನೆಂದೆನೆ ಜರಿದು ಕೈವಿಡಿದು ಬರಸೆಳೆಯೆ
ಅಲ್ಲಿ ನಸುನಗುತೆ ಸಿದ್ಧಂ ನೋಡಿದಂ ಕಳಿಯೆ
ನೋಡೆ ಹಸ್ತಸ್ತಂಭ ನೋಡೆ ಜಿಹ್ವಾಸ್ತಂಭ
ಆಡಂಬರಂ ನಿಂದು ಕೂಡೆ ಪಾದಸ್ತಂಭ
ಆಗ ಚೋಳಂ ಕೇಳ್ದು ನಡನಡನೆ ನಡುಗುತುಂ

ರಾಗದಿಂದಲ್ಲಿಂದೆ ಪೈಯ್ಯಿಕ್ಕಿ ಪೊಗಳುತ್ತುಂ
ಬಂದು ಪದದೊಳು ಬಿದ್ದ ಚೋಳ ನೃಪನಂ ಕಂಡು
ಇಂದುಧರನರುಪಿದನೆ ಏಳೆಂದು ಕೈಕೊಂಡು
ಎತ್ತಿ ವಿಷ್ಣುಗೃಹಕ್ಕಾಗಿ ಬರುತ್ತೊಪ್ಪಿದಂ
ಕರ್ತೃ ಚೋಳಂ ಕೈಗೊಡುತ್ತ ಬರಲೊಪ್ಪಿದಂ
ಸೋಮಧರ ಮಹಿಮಾನಸಮಾನ ಶೈವಾರ್ಚಕಂ
ಸಾಮರ್ಥ್ಯ ಕಂದಾವಲಿಯುಳಿಯ ಪಾಲಕಂ
ಲಾಕುಳದ ಲಾಕ್ಷಣಿಕ ನಮ್ಮಮ್ಮ ಬರುತಿರ್ದ
ನಾಕಸ್ಮಿಕಂ ಮರುಳನಂತೆ ನಡೆತರುತಿರ್ದ
ಇಂತು ವಿಷ್ಣುಗೃಹದ ಕಾಣ್ಕೆಗೊಲವಿಂ ಬಂದು

ಅಂತಲ್ಲಿ ಚೋಳಂ ಸಹಿತ ಮೀರ್ವರುಂ ನಿಂದು
ಎಲೆ ಚೋಳ ಹೇಸದಿರು ನೋಡುತಿರು ನೀನೆನುತೆ
ಎಲೆಲೆ ಹೇಸಿದೊಡೆ ನುಡಿಯಿಲ್ಲ ಪ್ರತಿಮೆಗೆ ಎನುತೆ
ಬಗೆದು ಸಿದ್ಧರ ದೇವನಾ ಪ್ರತಿಮೆಯುಂ ನೋಡಿ
ಮಿಗೆ ತನ್ನ ಪುಲ್ಲಿಂಗದತ್ತ ಕೈಯ್ಯಂ ನೀಡಿ
ತೆಗೆದು ತನ್ನಯ ವೀರ್ಯಮುಂ ಮೂರ್ಧ್ನಿಯೊಳಗೊತ್ತಿ
ಬಗೆಯದಾ ಪ್ರತಿಮೆಯ ಶಿರೋಮಧ್ಯದೊಳಗೊತ್ತಿ
ಚೋಳನ ಮೊಗಂ ನೋಡಿ ಹೇಸಿ ತಲೆಯಂ ಬಾಗೆ
ಚೋಳ ಹೇಸಿದೆ ನುಡಿಯದೀ ಪ್ರತಿಮೆ ಸೈತಾಗೆ
ಎಂದೊಮ್ಮೆ ನುಡಿಯಿಸುತೆ ಚೋಳಂಗೆ ಬೀಳ್ಕೊಟ್ಟು
ನಿಂದಿರೆಂದೆನುತೆ ಮರುಳಾಳಂಗೆ ಪೈಗೊಟ್ಟು
ಅರುಳಾಳ ಪೆರುಮಾಳೆಯೆಂಬ ನಾಮವನಿತ್ತು
ತಿರುಗಿದಂ ಬಡಗ ದೇಶಕ್ಕೆ ಜಸಮಂ ಪೊತ್ತು
ಇಂತುತ್ತರಾಭಿಮುಖವಾಗಿ ನಡೆತರುತಮಿರೆ
ಸಂತತಂ ಸಿದ್ಧರೇವಣ ತಂದೆ ಬರುತಮಿರೆ

**ಪ್ರಥಮಸ್ಥಲ ಸಮಾಪ್ತ.**

## ದ್ವಿತೀಯಸ್ಥಲ.



**ವೃತ್ತ**:— ಶಿವಲಿಂಗೋದ್ಭವನಾಗಿ ಚೋಳನರಗಕ್ಷೋಣೀತಳಕ್ಕೈದಿಬಂ।
ದವಿಚಾರಂಪುಗದಂತೆ ತಾಳ್ದು ಜಡವೇಷಾಕಾರಮಂ ಕಾಂಚಿಯೊಳ್।
ತವೆ ವಿಷ್ಣು ಪ್ರತಿಮೆ ಪ್ರತಿಷ್ಠೆಗೆ ಮನಂಗೊಟ್ಟೆಳ್ಕರಿಂದಂ ಮರ।
ಳ್ದು ವಿಳಾಸಂ ಮಿಗೆ ಸಿದ್ಧರೇವಣಶಿವಂ ಸಾರ್ದುತ್ತರ ಪ್ರಾಂತಮಂ॥

**ಗದ್ಯ**:— ಇಂತು ದಕ್ಷಿಣ ದೇಶಮಂ ಪೊಕ್ಕು ಚೋಳಂಗೆ ಪ್ರತ್ಯಕ್ಷಮಂ ತೋರಿ ಕಂಥೆಯ ಕಮಷ್ಠೀಯ ರೂಪಂ ವಜ್ರಕುಂಡಲದ ವಜ್ರಧರ ಲಾಕುಳದ ಲೋಹೃಕ ಬಂಧು ಮೆಟ್ಟಿದ ಪಾವುಗೆಯ ಕಟ್ಟಿಧಿಕಂ ಕೋವಣದ ಭಾವಕಂ ಅಂಗಜರಿಪುವೆನಿಸಿರ್ದ ರೇವಣಸಿದ್ಧಂ ಸಿದ್ಧಕುಲ ಚಕ್ರವರ್ತಿ ತಿರುಗಿ ಬಂದುತ್ತರದಿಶಾಭಾಗದ ಮಾಸನೂರ ಪೊರಗಿರ್ಪ ಶಿವಾಲಯದೊಳಗವತರಿಸಿ ಸಂಧ್ಯಾಸಮಯದೊಳ್ ರಂಗಮಂಟಪದ ನಡುವೆ ಸಾರ್ದು ಕುಳ್ಳಿರ್ದುದುಂ, ಅಲ್ಲಿಯ ಪೂಜಾರಿ ಕಂಡು ಎಲೆಯಯ್ಯ ಎಲೆ ಸಿದ್ಧ ಇಲ್ಲೇಕಿರ್ದಪೆ? ಈ ಶಿವಾಲಯದ ಮುಂದಣ ವೃಕ್ಷದೊಳಿರ್ಪ ಕಾರಣಿಕಂಗಳಪ್ಪ ತಿಗುಣಿಗಳೆರಡರಿಂದಿಲ್ಲಿ ಪಟ್ಟಿರ್ದ ದೇಶಾಂತ್ರಿಗಳ್ ಪಲಂಬರ್ಮಾಡಿದರಿಲ್ಲಿರದಿರೆಂದು ಪೇಳೆ, ರೇವಣಂ ನಸುನಗುತಂ ದೇಶಾಂತ್ರಿಯಾದವ ತಿಗುಣೆ ಚಿಕ್ಕಾಟ ಪಸಿವು ಬಾಯಾರಿಕೆಗಂಜಿದರೆಂತಹುದು? ನಾನಿಲ್ಲಿಯೆ ಪಟ್ಟಿರ್ದು ಬಂದುದಂ ಕಾಣ್ಬೆನೆನೆ ಅಗಳಾತಂ ನಿಲಲಮ್ಮದೆ ಮರಕ್ಕೆ ಪೋದನಿತ್ತಲ್ ನಿರುಪಮ ಸಿದ್ಧಂ ಧೈರ್ಯನಿಧಿ ತ್ರಿಭುವನ ಬಾಂಧವಂ ತ್ರಿಕಾಲಜ್ಞಂ ತನ್ನ ಮನದೊಳ್ ನೆನೆದು ನೋಡಿ ರಾಕ್ಷಸ ಮಿಥುನಂ ಶಾಪಹತರಾಗಿರ್ಪುದನರಿದಿವರು ಮಾಳ್ಪ ಪ್ರಾಣಿವಧೆಯಂ ಮಾಣಿಸುವೆಂ ಜಗದ್ಧಿತಾರ್ಥಮಾಗಂತಿದಂ ತೀರ್ಚಿದಪೆನೆಂದು ವಿಚಾರಿಸುತ್ತಿರೆ ಇರೆ, ನಿಷ್ಠುರದೊಳಿರ್ದ ತಿಗುಣೆಗಳುಂ ಮುದಿಂದೆ ಘಳಘಳಸಿಳಿದು ಬಂದು ಪರಮ ಶಿವಯೋಗಿಯ ಇರವಂ ಕಂಡು ಭಯಂಗೊಂಡು ತಿರುಗಿ ಬಂದು ಮರನೇರುವಾಗಲಪ್ರತಿಮ ರೇವಣಸಿದ್ಧಂ ಭೋಂಕನೆ ಕಂಡು ನೊಸಲಗಣ್ಣಿಂಗೆ ಬೆಸನಿಯ್ಯೆ ಬಿಸುಗಣ್ಣಾ ಬೆಂಕಿಯಿಂ ಮರಂಗಳೆರಡುಂ ಕರಿಮುರಿಯಾಗಿ ಘರಘರಲನುರಿದು ಭಸ್ಮಾವಶೇಷಮಾಗಿ ತಿಗುಣೆಗಳೆರಡುಂ ಮಿಗೆ ಬೆಂದು ಮುಗೂರಿ ಕೆಡೆದು ಕಾಹೇರಿ

ಕರಗಿ ಕುದಿದುಕ್ಕಿ ಕಕ್ಕಳಿಯುದೆರಡುಂ ಉಕ್ಕಿನ ಗುಂಡುಗಳಾಗಿರೆ ರಕ್ಕಸರ ಬಲ್ಪಿಂಗೆ ಬೆಕ್ಕಸಂಬಟ್ಟು ಮುಕ್ಕಣ್ಣ ಸಿದ್ಧನರುಣೋದಯದೊಳೀಳ್ದೆರಡು ಗುಂಡುಗಳಂ ಕರದೊಳ್ಪಿಡಿತಂದು ಮಾಸನೂರ ಕಮ್ಮಾರನ ಕೈಯ್ಯೊಳಿಕ್ಕಿಡೆ ಕಂಡವಂ ಭೀತಚೇತನನಾಗಿ ತಲೆಯೊಳ್ಕೈಯ್ಯಿಟ್ಟಂಜದಿರೆಂದು ಪೆಣ್ಗಂಡನೊಂದು ಕಠಾರಿಯಂ ಮಾಡಿಸಿ ಗಂಡು ಗುಂಡಂ ಕಾಸಿದೊಡಂ ಕಡಿದೊಡಂ ಬಡಿದೊಡಂ ನಿಗುರದಿರೆ ಆ ಮನೆಯ ಮುಂದೊರ್ಬಂ ಪಿಡಿದ ಪೊಸ ಮಾಂಸಮಂ ಕಂಡದಕ್ಕೆ ನಿಲ್ಲದೈದೆ ನಿಗುರುವುದಂ ಕಂಡು ಕಾಲಹರನಣುಗನಾ ಪಿಶಿತಮಂ ತೋರಿಸುತ್ತಲಗಂ ಮಾಡಿಸಿ ಪಿಡಿದು ನೋಡಿದೊಡೆ ತನ್ನ ಕೈಯ್ಯೊಳಿರ್ದುಂ ತನಗೆ ಹಲು ಪೊರೆವ ಸುರಗಿಯಂ ಕಂಡು ಬೆರಗಾಗುತ್ತಿಂತಿದಂ ಕೈವಿಟ್ಟಿನಪ್ಪೊಡೆ ಈಯುಲಗು ಜಗವನಂಡಲೆಗುಮೆಂದು ಮಾಸನೂರ ಮುಂದೆ ಪರಿವ ನದಿಯ ನಡುವಣ ಪೆರ್ಮಡುವಿನೊಳಾವಗಂ ತೋರದಂತೆ ಪೊಸೆ ಕೆಳಗಾಗಿರಿಸುತಿನ್ನೆಲ್ಲಿಯುಂ ಮಿಸುಕದಾರ್ಗಂ ವಶವಾಗದಿಲ್ಲಿಯೇ ನಿಲ್ಕೆಂದು ನಿಯಾಮಿಸೆ

ಸಾಮರ್ಥ್ಯಭೂಷಣಂ ಮನುಗಳ ಮನೆದೈವಂ ಮುನಿಗಳ ಮೂರ್ತಿ ಜ್ಯೋತಿಸಿದ್ಧರ ಸಿದ್ಧರಸನೆನಿಪ ರೇವಣಸಿದ್ಧಂ ಜಯಂತಿಗೆ ಸಗೆದು ಪುರಮಂ ಪೊಕ್ಕರಮನೆಯ ಸಭಾನಿಳಯಾಗ್ರದೊಳ್ ನಿಂದಿರೆ ವಿಕ್ರಮಾದಿತ್ಯಂ ಕಂಡಿದಿರೇಳ್ದು ಪೈಯ್ಯಿಕ್ಕಿ ಬಂದು ಕೈಗೊಟ್ಟು ತಂದು ಸಿಂಹಾಸನದೊಳ್ಬಿಜಯಂಗೈಸಿ ಶ್ರೀಪಾದಮಂ ತೊಳೆದು ಪಾದೋದಕಮಂ ತಳೆದು ಕೈಮುಗಿದು ದೇವ ಬಿಜಯಂಗೈದು ಬರ್ದುಂಕಿಸಲ್ಬಂದ ಕಾರಣವೇನೆಂದು ಬಿನ್ನವಿಸೆ, ರೇವಣಸಿದ್ಧಂ ತನ್ನ ಕೈಯ್ಯ ಕಠಾರಿಯಂ ತೋರಿಸುತ್ತಿಂತೆಂದಂ, ಉಡುವೊಡೆ ದಿವ್ಯವಸ್ತ್ರಂ ತೊಡುವೊಡೆ ದಿವ್ಯಾಭರಣಂ ಉಣ್ಬೊಡಮೃತಾನ್ನಂ ಏರುವೊಡೆ ವಾಹನಂ ಕೂಡುವೊಡೆ ದೇವಾಂಗನೆ ಕಾದುವೊಡೆ ನಿಶಿತಾಯುಧಂ ಒಪ್ಪುದಿಂತಿದಂ ಕುಡಲ್ಬಂದೆನೆಂದು ಮತ್ತ ಕಠಾರಿಯಂ ಕರುಣಿಸಿ ಕೊಟ್ಟಲ್ಲಿಂದ ನೆಗೆದು

ಕಲ್ಯಾಣದ ತಲ್ಲಿಗನಪ್ಪ ಕಲ್ಲಿಶೆಟ್ಟಿಯ ಗಾಣದ ಕೊಟ್ಟಿಗೆಗೆ ಬಂದು ಮುಗಿಲ ಮರೆಯ ಸೂರ್ಯನಂತೆ ಮಾಸಿದ ಪರುಷದಂತೆ ಗವಸಣಿಕೆ ಇಕ್ಕಿದ ಬೆಳಗಿನಂತೆ ಮುಸುಂಕಿದ ಸಾಮರ್ಥ್ಯದಂತೆ ಮೈಗರೆದು ಶಿವಜ್ಞಾನವಂತೆ ಅಜ್ಞಾನಿಗಳ ನೋಟಕ್ಕುದಾಸೀನವಪ್ಪ ಹೊರವೇಷದ ಹರಿದ ಕಂಥೆಯ ಅರುವೆ ಕೌಪೀನ ಪ್ರವಾಸಿಕವೇಷಂ ಪ್ರಭೂತವಾಗಿ ನಿಂದಿರ್ದ ಸಿದ್ಧನನರಿಯದೆ ತನಗಂ ತನ್ನ ಸತಿಗಂ ಗಾಣದೆತ್ತಿಗಂ ಒಂದೊಂದೆ

ಕರ್ಣಾದ ಕಲಿಸೆಟ್ಟಿಯರು ಕಂಡೆಲೆಯಯ್ಯ ಗಾಣದೆತ್ತಂ ಹೊಡೆದೊಡೆ ಹಿಂಡಿಯ ಮೆಲಲಿಕ್ಕುವೆಂ ನಡೆ ಎಂದು ನುಡಿಯಲವನಂ ಕೃತಾರ್ಥನಂ ಮಾಡುವುದ್ಯೋಗದಿಂದೊಡಂಬಟ್ಟು ಗಾಣದ ಕತ್ತರಿಯಂ ಕೇಣದೊಳೇರಿ ಜನದ ಬಳಿವಿಡಿದು ಸಕಲ ಭುವನವನೀ ತೆರದೋಳ್ ತಿರುಗುವುದೆಂಬುದಂ ತೋರುವಂತೆತ್ತಂ ಹೊಡೆದು ಗಾಣವುಂ ತಿರಿಗಿಸುತ್ತೀ ತೆರದಿಂ ಕೆಲವುಂ ದಿನಮಿರೆ ಮಂಗಳ ಸೇವ್ಯನ ಸಂಗದಿಂ ಕಲ್ಲಿಸೆಟ್ಟಿಯ ದರಿದ್ರಂ ಹರಿದು ಹಾರೆ ಸಂಪದವೇರೆ ಸುಖಿಯಾಗಿರ್ದೋಂದು ದಿನಂ ರಾತ್ರೆಯೊಳ್ ನಮಗೀ ಹಿಂಡಿಯ ಮರುಳನ ಬರವಿಂ ಲೇಸುಗಳೊದವಿತ್ತೆಂದು ಕಾರಣಿಕನಾಗದೆ ಮಾಣನೆಂದು ಹೆಂಡತಿಯೊಡನೆ ನುಡಿವುತ್ತಿರೆ ಭೋಂಕೆನೆ ತನ್ನ ಕೆಟ್ಟ ಕಣ್ಬಂದಿರೆ ಕೌತುಕದಿಂ ಸತಿಯ ಮೊಗಮಂ ನೋಡಲ್ಕಾಕೆಯ ಕಣ್ಬಂದಿರೆ ಬೆರಗಾಗಿ ಹೊರಗಣೆತ್ತಂ ನೋಳ್ಪೆನೆಂದು ಬರ್ಪಾಗಳೆತ್ತಿನ ಕಣ್ಬಂದಿರೆ ರೇವಣದೇವನೆತ್ತಂ ನೋಯಿಸಲೇಕೆಂದದಂ ಬಿಟ್ಟು ಕೊಟ್ಟಿಗೆಯ ಧವಳಾರದ ಕತ್ತರಿಯ ಸಿರಿ ಮಂಚದ ಮೇಲಿರ್ಪ್ಪೊ ಬತ್ತಿಯ ಹಂಗಿಲ್ಲದ ಬೆಳಗಿನೋಳ್ ದಿವ್ಯಾಂಗನೆಯರಿಂ ಪದತಳಮನೊತ್ತಿಸಿಕೊಳುತ್ತಿರ್ಪ ನಿತ್ಯನಿಳಯನಂ ಕಂಡು ಕಲ್ಲಿಶೆಟ್ಟಿ ಕೌತುಕಂಬಟ್ಟು ನೋಡಲಮ್ಮದೆ ಮೆಯ್ಯಿಕ್ಕಿ ಬೀಳ್ದು ದೇವರ ದೇವ ಕರುಣಿಪುದೆಂದು ಚರಣಮಂ ಪಿಡಿದಿರ್ದ ತಿಲಘಾತಕನನೆತ್ತಿ ಮಸ್ತಕದೊಳು ಹಸ್ತಮನಿಟ್ಟು ತೆಲ್ಲಿಗಂಗೆ ತವನಿಧಿಯಂ ಕೊಟ್ಟುದರಿಂದಿವ ನರಿದ ಸಿನ್ನಿರಲಾಗದೆಂದು

ಮಂಗಳವಾಡಕ್ಕೆ ಬಂದು ಪುರದ ರಾಜವೀಥಿಯೋಳ್ನಡೆತರ್ಪಾಗಳ್ ಧನದೋಳ್ಪಡವೆ ರೂಪು ಗುಣದೊಳ್ಸಿರಿವಂತೆಯುಪ್ಪಳೊಬ್ಬಳ್ಮಾಯಿದೇವಿ ಎಂಬ ಪಣ್ಯಾಂಗನೆಯಂ ಕಂಡಲ್ಲಿ ನಿಂದವರ ಮನೆಯ ಕೀಳ್ಮಾಡಿಯೊಳ್ ಬಳಲ್ದಂತೆ ಕುಳ್ಳಿರಲಾ ಸೂಳೆ ಕಂಡೆಲೆಯಯ್ಯ ಅಕ್ಕಟಿರೆ ಮರುಳೈಯ್ಯ ಎಲೆ ಅರಿಮರುಳ ಅನ್ನವನುಣಲ್ಬಡೆಯದೆ ಬನ್ನಬಟ್ಟುದರಿಂದಮ್ಮ ಮನೆಗೊಮ್ಮೊಮ್ಮೆ ಕಂಬಿಯಗ್ಗವಣಿಯಂ ತಂದೆಮಗುಳ್ಳಂಬಳಮನುಂಡು ಸುಖಿಯಾಗಿರ್ಪುದೆನಲಾ ಮಾತಂ ಕೈಕೊಂಡು ಅಂತವರ ಮನೆಯೊಳ್ ಶಿವನ ಬೆಸನಿಂ ಕೆಲವು ದಿನಮಿರಲತ್ತಲ್

ಲಂಕೆಯೊಳ್ ರಾವಣಂ ರಾಮನ ಸರಳಿಂದಳಿವಲ್ಲಿ ವಿಭೀಷಣನಂ ಕರೆದೊಂಬತ್ತು ಕೋಟಿ ಶಿವಲಿಂಗ ಪ್ರತಿಷ್ಠೆಯಂ ಮಾಳ್ಪೆನೆಂದು ಕೈಕೊಂಡ ನೇಮಕ್ಕಿಂದಿಂಗೆ ಆರುಕೋಟಿಯಳವಟ್ಟುವಿನ್ನು ಮೂರು ಕೋಟಿ ಶಿವಲಿಂಗಮಂ ಬಿಜಯಂಗೈಸಿ ಎನ್ನ ಮೋಕ್ಷಪಥಕ್ಕೆ ಸಲಿಸುವುದೆಂದು

ಡಿಕೊಳುತಿರ್ಪ ಸಮಯದೊಳ್ ವಿಭೀಷಣಂ ಪಚ್ಚೆ ಪಸಿಯುಚ್ಚೆ ವೈಷ್ಣ
ನಪ್ಪಂ ಕಾರಣದಿಂ ರಾವಣನಿಂಗಿಂತೆಂದಂ ಲಿಂಗಪ್ರತಿಷ್ಠೆಯತ್ಯಂತರಿದದರಿಂ
ಲಭವಪ್ಪ ನಾರಾಯಣ ಪ್ರತಿಷ್ಠೆಯಂ ಸೊಂಬತ್ತು ಕೋಟಿಯಂ ಮಾಡ
ಕ್ಕುಮೆನೆ ರಾವಣಂ ಮರಣಾವಸ್ಥೆಯಾದೊಡಂ ಮುಗುಳ್ನಗೆ ನಗುತಂ
ಳಿಲಿ ಮರುಳ್ನಿನ್ನ ನೆಚ್ಚಿನ ನಾರಾಯಣಂ ದಶಾವತಾರವಾದ ದೋಷ
ರಿಹಾರಕ್ಕೆ ಮೊದಲಿಂಳಿಲ್ಲಿ ಮತ್ಸ್ಯಕೇಶ್ವರ ಲಿಂಗ ಪ್ರತಿಷ್ಠೆಯಂ ಮಾಡಿ
ನದು ಹಿಂದಣ ಮಾತದಂತಿರ್ಕೆ. ಇಂದೀಗಳ್ ಸಹಸ್ರ ವೇದಿಯಪ್ಪೆನ್ನ
ಂದ ಬ್ರಹ್ಮೇತಿಯಂ ಲಂಕೆಯಿಂ ಗಂಧಹಾರನ ಪರ್ವತ ಕಡೆಯಾಗಿ
ಮು ಶಿವಲಿಂಗವಂ ಪ್ರತಿಷ್ಠೆಯಂ ಮಾಡಿದನಲ್ಲದೆ ತಾನೆ ಕಳೆದುಕೊಳ
ರದ ನಾರಾಯಣ ಹೆಸರ ರೂಹಿಂದೊಂದು ಗತಿಯುಂಟೆಂದು ನುಡಿವ
ನ್ನೊಡನೇನೆಂದಪೆಂ ಮಾತಂ ಬಿಟ್ಟು ಕಳೆದು ಮೂರು ಕೋಟಿ ಶಿವಲಿಂಗ
ತಿಷ್ಠೆಯಂ ಮಾಳ್ಪುದೆಂದು ರಾವಣನಂದು ನಾಕಲೋಕಕ್ಕೆ ನೆಗೆವುತಂ

ನಂಬುಗೆಗೊಂಡ ಪುಣ್ಯ ವಚನಮಂ ವಿಭೀಷಣಂ ನೆನೆದು ನೋ
ತುಂ ನೂರಾರಲ್ಲ ಮೂರು ಕೋಟಿ ಶಿವಲಿಂಗ ಪ್ರತಿಷ್ಠೆಯಂ ಮಾಳ್ಪ
ರಿದದಕ್ಕೆಂತು ಮಾಳ್ಪೆನೆಂದು ನಡೆತಂದು ಮತ್ಸ್ಯಕೇಶ್ವರ ಲಿಂಗೋಪ
ಷ್ಠೆಯಂ ಮಾಡಿದೊಡೆ ದೇವರ್ಕರುಣಿಸಿ ಉತ್ತರ ದಿಶಾಭಾಗದೊಳಗೆನ್ನ
ಗನಧಿಕತರ ಪಾರಮಾರ್ಥಿಕನಪ್ಪ ರೇವಣಸಿದ್ಧನಿರ್ಪನಾತಂಗೆ ಕುಂಡಲಂ
ಂಥೆ ಲಾಗುಳಂ ಮೆಟ್ಟಿದಾವುಗೆಯ ನೆಟ್ಟನೆಯ ಕುರುಪದಲ್ಲದೆಯುಂ
ಮ್ಮಾತನೆಲ್ಲಿದ್ದೊಡಲ್ಲಿ ಸುವೃಷ್ಟಿ ಸುಫಲ ಸಂಪದಂ ತಪ್ಪದೀ ತೆರದೊಳರಿ
ತನನರಸಿ ತರ್ಪುದೆಂದು ವಿಭೀಷಣಂಗೆ ಬೆಸಸಿ ಮಹಾಪ್ರಸಾದನೆಂದು
ಂಕೆಯಿಂ ಪೊರಮಟ್ಟು ತಾಂ ಕಾಮರೂಪನಪ್ಪುದರಿಂ ದ್ರಾವಿಡ ಚೇರ
ರಳ ತೆಲುಂಗ ಕೊಂಕಣ ಕರ್ಣಾಟ ಕಾಶ್ಮೀರ, ಕಳಿಂಗ ವಂಗ
ಂಗಾಳ ಲಾಳ ಗೌಳ ದೇಶಂಗಳಾದಿಯಾದ ದೇಶಂಗಳಂ ಪೊಕ್ಕುಪರ
ರ ವೇಷದಿಂದರಸುತ್ತಂ ಬಂದೆಲ್ಲಿಯುಮಾ ಕುರುಪಂ ಕಾಣದೆ ಬರೆವರೆ

ಮುಂದೆ ವಿಪುಳ ಫಲವಾದ ಮಂಗಳವಾಡದ ಭೂಮಿಯ ಸೊಂಪು
ಂಪದಮಂ ಕಂಡು ಇಲ್ಲಿರದೆ ಮಾಣ. ಅವ ದೇಶದೊಳೀ ಸಿರಿ ಇಲ್ಲೆ
ತ್ತಂ ಆ ಪಟ್ಟಣದ ಹೊರವೊಳಲ ಕೆರೆಯ ಕಡೆಯಣ ವಟವೃಕ್ಷದ
ಳಲೊಳ್ ವಿರೂಪಾಕ್ಷಸಿದ್ಧನೆಂಬ ನಾಮಮಂ ಕೈಕೊಂಡು ಕುಳ್ಳಿರ
ಲ್ಲಿಗೆ ರೇವಣಸಿದ್ಧಂ 'ಗುಪ್ತವೇಷಧರಂ ಪುರಮಂ ಪೊರಮಟ್ಟೊಂದೆರಡು
ಹ್ಮಾಂಡದ ಭಾರಮಂ ಧರಿಯಿಸುವಡಾನೆ ಸಾಲ್ವೆನೆಂಬಂತೆ ಕಂಬಿಯಂ

ತೊಡರ್ಚಿದೆರಡು ಘಟ ಸಹಿತಂ ಬಂದು ಕೆರೆಯೊಳ್ಪೊಕ್ಕು ಬ್ರಹ್ಮಾಂ
ಜೀವರಾತ್ರಿಯುಂ ತೀವ್ರವಂತೆ ಕಂಬಿಯ ಕೊಡಂಗಳಂ ತೀವ್ರುತ್ತಿರೆ ಃ
ಷಣನಹಿ ಭೂಷಣಂ ಬೆಸಸಿದ ಕುರುಹಂ ಕಂಡು ಬದುರ್ಗಂಕಿ
ಸುತ್ತಂ ಬಿಂದೆ ಹಿಂದೆ ಕಾಣ್ಬಳಿಕೆಯೊಪ್ಪಂದು ಮನೆಯನರಿದು ಮಾ
ದೇವಿಯುಗೋತ್ತ್ರಿಯುಂ ಕೊಟ್ಟಂದಿನ ಮಧ್ಯರಾತ್ರಿಯೊಳ್ವಿರೂಪಾಕ್ಷಸಿ
ರೇವಣತಂದೆಯ ಇರವಂ ನೋಳ್ಪೆನೆಂದು ಕದವಂ ತೆರೆದು ಪೊ
ನೋಡೆ ಮುಂದಣ ಜಾವದೊಳಗೆ ಧ್ಯಾನಂ ತೊಳಗೆ ನಿರುಪಾ
ಜ್ಯೋತಿ ಥಳಥಳಿಸಿ ಬಿಸಿಲ ಬೆಳಗು ಬೆಳ್ದಿಂಗಳ ತಂಪಂ ಕರೆದ
ಸಿಸುವ ತಣ್ಬೆಳಗಿನೊಳ್ ಲಕ್ಷ್ಮಿ ಸರಸ್ವತಿ ಶಚಿಯರ ಕೆಯ್ಯಿಂ ಪದ
ಮುನೊತ್ತಿಸಿಕೊಳುತಿರ್ಪ ನಿಜ ಸಿದ್ಧನಂ ಕಂಡು ವಿರೂಪಾಕ್ಷಸಿದ್ಧಂ ವೈ
ಷ್ಣುರೆ ರೇವಣತಂದೆಯರಿದು ಮುನ್ನಿನ ವಿಭೀಷಣ ರೂಪಂ ಬಿ
ಭೀಷಣ ರೂಪಂ ಕೈಕೊಂಡೇಕೆ ಬಂದೆ ಎಂದು ಬೆಸಸೆ ದೇವ
ಲಂಕೆಯೊಳ್ ತ್ರಿಕೋಟಿ ಶಿವಲಿಂಗ ಪ್ರತಿಷ್ಠೆಗೆ ಸಕಳಾಚಾರ್ಯ
ನಿನ್ನನರಸಿ ಬಂದೆನೆಂದು ಬಿನ್ನವಿಸುತಿರ್ಪ ಸಮಯದೊಳರುಣೋದ
ಮಾಗಲಿವೆಲ್ಲ ಮಾಯಿದೇವಿ ಕಂಡು ಪದದೊಳ್ಬಿದ್ದು ನಿಮ್ಮ ನಿ
ನರಿಯದೆ ಬೆಸಗೆಯ್ಸಿಕೊಂಡ ಕರ್ಮಿ ಜೀವಿಗೆ ಸರ್ವಾಪರಾಧಿಗೆ ಕ
ಪ್ರುಪೆನೆ ಕೃಪೆಯಿಂ ನೋಡಿ ವಿಭೂತಿಯನೆರಡೆಡೆಯೊಳಿಡಿಸಿ ಒಂ
ಮುಷ್ಟಿ ಶಿವಲಿಂಗನಾಗೆ ಮತ್ತೊಂದಂ ಮುಟ್ಟಿ ಹೊನ್ನ ರಾಶಿಯ
ಈ ಹೊನ್ನಂ ಕೊಂಡೀ ಶಿವಲಿಂಗವನಾರಾಧಿಸುತ್ತಿರ್ಪುದೆಂದು ತ್ರೈಲೆ
ಕ್ಯ ಯಿತ್ತಟ್ಟಿ ವಿಭೀಷಣ ಸಹಿತಂ ಲಂಕೆಗೆ ನೆಗೆದು ಸಮುದ್ರ ಮ
ಮುತ್ತ್ಯಕೇಶ್ವರನ ಸಮಕ್ಷದೊಳ್ ಮಾಡಿದ್ದೇ ಮುಹೂರ್ತವಾಗೆ ಮ
ಕೋಟಿ ಶಿವಲಿಂಗ ಪ್ರತಿಷ್ಠೆಯುಂ ಮಾಡಿ ಮಜ್ಜನ ಪೂಜೆಯಾರೋ
ನಿರಂಜನಾದಿಗಳುಂ ಕುಂದಲಾಗವೆಂದು ವಿಭೀಷಣಂಗೆ ನಿಯಾಮಿಸು
ತ್ರಂಗೆ ಬೀಳ್ಕೊಂಡು ರೇವಣಸಿದ್ಧಂ ದುರಿತವ್ರಜವಿರುದ್ಧಂ ಶಿವಚ
ಪ್ರಬುದ್ಧಂ ಲೋಕಪ್ರಸಿದ್ಧಂ ಸಮಗ್ರ ತೇಜೋವಿಲಸಿತಂ ಜಲಧಿ
ಪೀದುರ್ ತಣಿಯದೆ ನಭದ ನವಿಗೆ ಥೀಂಕಿಡುವ ವಡಬಾನಲ
ಸಮುದ್ರ ಮಧ್ಯದ ಲಂಕೆಯಿಂ ಭೋಂಕನೆ ಗಗನ ತಳಕ್ಕೆ ನ
ಸಂತುಪಲ್ಲಿಯು ೨.

ದ್ವಿತೀಯಸ್ಥಲ ಸಂಪೂರ್ಣಂ

## ತೃತೀಯಸ್ಥಲ.

→✻*✻←

**ವೃತ್ತ**:—ಪಡೆದು ಮರುಸ್ನದೀತಟದ ತಾವರೆ ಪೂಗಳನೆತ್ತಿಪಾರಿಜಾ- । ತದ ಕುಸುಮಂಗಳಂ ತಿರಿದು ಕಾಶಿಯೊಳೊಪ್ಪುವ ವಿಶ್ವನಾಥನಂ ॥ ಸದಮಳ ಹೇಮಕೂಟ ಪತಿಯಂ ಶ್ರೀ ಪರ್ವತ ಮಲ್ಲಿನಾಥನಂ । ಪದವಿಸೊಳಷ್ಟುಷಷ್ಟಿ ಶಿವಲಿಂಗವನರ್ಚಿಸುತಿರ್ದನಳ್ಕರಿಂ ॥

### ರಗಳೆ

ಅಂತಿರ್ದು ಮತ್ತೆ ಮಂಗಳವಾಡದೊಳ್ಪೊಕ್ಕು
ಸಂತತಂ ಬಿಜ್ಜಳನ ಸಭೆಯೊಳ್ಮನಂ ಮಿಕ್ಕು
ಪಾಣಿಪಾತ್ರೆಯನಾಂತು ನಿಂದಿರ್ಪ ಸಮಯದೊಳ್
ಜಾಣನಲ್ಲದ ನೃಪತಿ ಪರಿಕಿಸುವ ಚಿತ್ತದೊಳ್
ಕುದಿಪೋಗರವನಿಕ್ಕಿಸಲ್ಕಗುತೆ ಕೈಕೊಂಡು
ಸದಮಳ ಕಂಭದೋಳ್ ಕೈದೊಡೆಯಲುರಿಗೊಂಡು
ಅರಮನೆಯ ಮನೆಗಳೊಳಗುರಿ ಭುಗಿಲ್ಭುಗಿಲಿಡಲು
ತರತರದ ಉಪ್ಪರಿಗೆಯೊಳಗೆಯುರಿ ಭುಗಿಲಿನಲು
ಓಲಗದ ಮನೆಯುರಿಯುಲಾನೆ ಸಾಲೆಗಳುರಿಯೆ
ಮೇಲೆನಿಪ್ಪುಪ್ಪರಿಗೆ ತುರಗ ಸಾಲೆಗಳುರಿಯೆ
ಕಂಡು ಬಿಜ್ಜಳನಲ್ಲಿ ನಡುಗಿ ಚರಣಕ್ಕೆರಗೆ
ತಂಡದುರಿ ನಿಂದು ತಣ್ಪಿನ ಸೋನೆ ಮಳೆ ಮಸಗೆ
ಬೆರಗಾಗಿ ಬಿಜ್ಜಳಂ ನೀವೆನಗೆ ಕರುಣಿಪುದು
ಕರೆಗೊರಲನವತಾರ ಸುಖದೊಳಾರೋಗಿಪುದು
ಎಂದೊಡಾ ಪೊರ್ಬರುಂಬುವರಲ್ಲ ಕೇಳರಸ
ಇಂದು ನಿನ್ನಯ ಕಟಕವೆಲ್ಲಂ ಸಹಿತಲರಸ
ಆರೋಗಿಸುವೆನೆನಲ್ಕೇವ ನಾನಾರ್ಪೆನೇ
ಈ ರಾಜ ಕಟಕಕ್ಕೆ ಪೊಗಸಲಾನಾರ್ಪೆನೇ
ಆರೆನೆನೆ ನೀನಂಜಲೇಕೆ ಬಿಜ್ಜಳ ಕೇಳ
ನಾರೆನುತ್ತಿಲ್ಲರ್ಗೆ ದೇವರಿರ್ದಪ ಕೇಳ
ಎಂದೈದು ಮಾನಕ್ಕಿಯೈದು ಸೊಲ್ಲಗೆ ತುಪ್ಪ

ದಿಂವೆ ಕಟಕವನೂಡುತಿರ್ದನಿಂತರಿದಪ್ಪ
ಸಿದ್ಧನಾ ಕಟಕವ.ಂ ಕರುಣದಿಂದಂ ತಣಿಪಿ
ಉದ್ಧತನೆನಿಪ್ಪ ಬಿಜ್ಜಳನ ಗರ್ವವನಿಳುಪಿ

ಅಲ್ಲಿಂದ ನೆಗೆದನಾ ಕೊಲ್ಲಾಪುರಕ್ಕಾಗಿ
ಬಲ್ಲಿದಂ ಸಕಳ ಸಾಮರ್ಥ್ಯ ಭೂಷಿತ ಯೋಗಿ
ಬಂದು ದಿವ್ಯಾ ಪುರದ ಬಾಗಿಲೊಳ್ಪುಗುವಲ್ಲಿ
ಸಂದ ನಿರುಪಮಸಿದ್ಧನೆಂದರಿಯದವರಲ್ಲಿ
ಏಕೆ ಪೊಕ್ಕಪೆ ಸಿದ್ಧ ಸಾಮರ್ಥ್ಯಯುತರುಂಟು
ಏಕೆ ಕೆಟ್ಟಪೆ ಬರ್ದುಕಿ ಪೋಗು ಬಲ್ಲಿದರುಂಟು
ಎನುತಂ ಗತಿ ಸ್ತಂಭವಂ ಮಾಡೆ ಮೀರುತುಂ
ತನತನಗೆ ಪೊದ್ದಲಮ್ಮದೆ ತೆರನ ಮಾಡುತುಂ
ನೆರೆ ಗತಿಸ್ತಂಭವಂ ಮಾಡಿದರ್ನಡೆಗೆಡಲ್
ಉರೆ ಜಿಹ್ವೆಯುಂ ಕಟ್ಟಿದವರೆಲ್ಲ ನುಡಿಗೆಡಲ್
ಏನೇನು ಕುಟಿಲವುಂ ಮಾಡಿದುದು ತವುಗಾಗೆ
ನಾನಾ ವಿಧದ ಕ್ಷುದ್ರ ವಿದ್ಯೆ ತಾಗದೆ ಪೋಗೆ
ನಸು ನಗುತೆ ನಡೆದು ಗೋರಕನಾಥನಿಳಯದೊಳು
ಎಸೆವ ದಿವ್ಯಾನಿಕರ ವೋಲಗಿಪ ನಿಳಯದೊಳು
ಬಂದಲ್ಲಿ ಪಾಣಿಪಾತ್ರೆಯನೊಪ್ಪದಿಂ ಬೇಡೆ
ಅಂದು ಗೋರಕನಾಥನಲ್ಲಿ ಕಟಕಿಯನಾಡೆ
ದೇವ ಶಿವಸಿದ್ಧನೀತಂ ಭೀತಿಯಾದಪುದು
ಭಾವಿಸುವೊಡೀ ನಿಲವು ದನುಜಮನುಜರ್ಗರಿದು
ಎನುತಲ್ಲಿ ಹಿರಿಯ ಲಕ್ಕಾದೇವಿ ನುಡಿವುತಿರೆ
ಮನದೊಳಗೆ ಗೋರಕಂ ಲೆಕ್ಕಿಸದೆ ನಗುತಮಿರೆ
ಚಿಕ್ಕ ಲಕ್ಕಾದೇವಿ ಪಾಣಪಾತ್ರೆಗೆ ತಂದು
ಇಕ್ಕಿದಳ್ ನಸುನಗುತ ಹೊಸ ಕರಾಂರಿಯನಂದು
ಇಕ್ಕೆ ರೇವಣಸಿದ್ಧನಲ್ಲಿ ಬಿಸುಗಣ್ಣಿಂದೆ
ಮಿಕ್ಕು ನೋಡಿದೊಡೆ ಲೋಹವು ಕರಗೆ ಭರದಿಂದೆ
ಒಡನೆ ಕೈಕೊಂಡನಾ ಲೋಹ ರಸ ಭಿಕ್ಷವುಂ
ಮೂಡಿತ್ತು ತಾನೊಡೆದು ಗೋರಕನ ವಕ್ಷವುಂ

ಕುಳ್ಳಿರ್ದನುರದೊಳಗೆ ಮೂಡಿದ ಕಠಾರಿಯಂ
ತಳ್ಳಂಕದಿಂದೆ ನೋಡುತ್ತೆ ಮಾರಾರಿಯಂ
ಹಿರಿಯು ಲಕ್ಷ್ಮಾದೇವಿ ಗಳಗಳನೆ ನಡೆತಂದು
ಚರಿತದಿಂ ಮಹಲಕ್ಷ್ಮಿಗ್ರರುಪೆ ಭರದಿಂ ಬಂದು
ಉತ್ತುಮಾಂಗ ಸ್ಥಲದ ಶಿವಲಿಂಗ ಸಂಪನ್ನೆ
ಉತ್ತುಮ ಶಿವಾಚಾರನಿಧಿ ಲೋಕದೊಳ್ಪನ್ನೆ
ನಡೆತಂದು ಸಿದ್ಧರೇವಣ ಯತಿಗೆ ಶರಣೆಂದು
ನಡನಡಂ ನಡುಗಿ ಕರುಣಿಪುದು ಕರುಣಿಪುದೆಂದು
ಮುಂದರಿಯದವರ್ಗೆ ಮುನಿವರೆ ಸಿದ್ಧಕುಲಪತಿಯೆ
ಇಂದು ಕರುಣಿಸುವುದೆನಗಾಗಿ ಸಿದ್ಧರ ಗತಿಯೆ
ಎಂದೊಡಾ ಪಾಲ್ಗಡಲ ಮಗಳ ಮಾತಂ ಸಲಿಸಿ
ಅಂದುಗುಳ್ದನಾ ಲೋಹರಸವೆಲ್ಲ ವೋಕರಿಸಿ
ಉಗುಳ್ದಂ ಕಠಾರಂ ಕಳಲ್ಚಿ ಬಿದ್ದುದು ನೋಡ
ಮಿಗೆ ಕೌತುಕಂ ಬಟ್ಟರಾ ಸೇವ್ಯರುಂ ನೋಡ

ಇಂತು ಕೊಲ್ಲಾಪುರದೊಳತಿ ಮಹಿಮೆಯಂ ತೋರಿ
ಮುಂತೆ ಪುರಜನವೆಲ್ಲ ನೋಡುತ್ತಲಿರೆ ಮೀರಿ
ನೆಗೆದನಾಕಾಶಕ್ಕೆ ಸಿದ್ಧ ರೇವಣನಂದು
ಬಗೆಮಿಗಿಲ್ವಾರಣಾಸಿಯೊಳು ನಿಂದಂ ಬಂದು

ಇರಲಿತ್ತಲತ್ತ ಮಂಗಳವಾಡದೊಳಗಿರ್ಪ
ನರಪ ಬಿಜ್ಜಳರಾಯನೋಲಗದೊಳಿಸೆದಿರ್ಪ
ಸಮಯದೊಳ್ಮಾತು ಮಾತಿಂ ಮಾಸನೂರಲ್ಲಿ
ವಿಮಳ ನದಿಯೊಳಗೆ ತೋರ್ಪುದು ಸುರಿಗೆ ತಾನಲ್ಲಿ
ಆರಿಂಗಸಾಧ್ಯವದು ತೆಗೆಯಬಾರದು ದೇವ
ಆರ ಸಾಮರ್ಥ್ಯಮಂ ಕೊಳ್ಳದಿನ್ನೆಲೆ ದೇವ
ಎಂದೊಡಾ ಸುರಿಗೆಯುಂ ತೆಗೆಯಬಲ್ಲವರುಂಟೆ
ಇಂದೆನ್ನ ಕೈಸಾರ್ದೊಡೆನಗೆ ತೀರದುದುಂಟೆ
ಎನುತಲ್ಲಿ ಪತ್ತಂ ಸಹಸ್ರ ಹೊನ್ನಂ ಕಟ್ಟಿ
ಮನ ಒಲಿದು ನೆರೆ ಕಳಿಪುತಿರ್ದನರ್ಥಂ ಮುಟ್ಟೆ

ಕಳುಪೆ ಬಂದರಸುತ್ತೆ ದೇಶದೇಶದೊಳೆಲ್ಲ
ತೊಳಲುತ್ತಮಿರೆಬಂದನತಿ ಕುಹಕಮುಂ ಬಲ್ಲ
ಕಪ್ಪರನೆಸಪ್ಪ ಬಹು ಕುಟಿಲ ಕುಹಕದ ಜೋಗಿ
ಒಪ್ಪುವ ಸಹಸ್ರ ಯೋಗಿಣಿಯರ್ಗೆ ಪತಿಯಾಗಿ
ಬಂದು ಬಿಜ್ಜಳ ಕೇಳು ಸುರಿಗಿಯುಂ ತೆಗೆದಪೆಂ
ಒಂದುಂಟು ಮಾಳ್ಪುದು ನಿನಗದಂ ಪೇಳ್ದಪೆಂ
ಕನ್ನಿಕೆಯರಂ ಪನ್ನೆರಡು ಸಾವಿರವನಿಕ್ಕೆ
ಚೆನ್ನ ಸುರಗಿಯುನಿಂತು ತೆಗೆದಪೆಂ ನಿಮಿಷಕ್ಕೆ

ಎನಲೊಡಂಬಟ್ಟು ಬಿಜ್ಜಳನಲ್ಲಿ ಮರುಳಾಗಿ
ಮನವಾರೆ ಕಪ್ಪರನ ಕುಹಕಕ್ಕೆ ವಶವಾಗಿ
ನಾಡೊಳಗೆ ನೋಡಿ ಕನ್ನಿಕೆಯರಂ ನೆರಪಿದಂ
ಬೀಡಿನೊಳಗಣ ಕುಮಾರಿಯರ ನೆಳತರಿಸಿದಂ
ನಾಡೆಲ್ಲ ಕಣ್ಣನೀರಿಂದೆ ಕರ್ರಗೆ ಕರಗೆ
ಬೀಡೆಲ್ಲ ಗೋಳಿಟ್ಟು ಮೊರೆಯಿಟ್ಟು ನೆರೆ ಕೊರಗೆ
ತಂದೆತಾಯ್ಗಳ್ಮೊರೆಯಿಡುತ್ತಮಿರೆ ತರಿಸಿದಂ
ನಿಂದ ಬಂಧುಗಳೆಲ್ಲ ಮುಯ್ಯಲಿಡೆ ತರಿಸಿದಂ
ಪನ್ನೆರಳ್ಸಾಸಿರಕ್ಕೊಬ್ಬಳೆ ಕೊರತೆಯಾಗೆ
ಮನ್ನಿಸದೆ ಕೂಡಿದಂ ಭೂತಳಂ ಬೆರಗಾಗೆ
ಇನ್ನೊಬ್ಬಳೀ ಕೊರತೆ ಎಂತು ಮಾಡುವೆನೆಂದು
ತನ್ನ ಪುರದೊಳಗೆ ಶೋಧಿಸುತೆ ಬರವರಲಂದು

ಅಲ್ಲಿ ರೇವಣಸಿದ್ಧನಣುಗಿ ತಾನೆಸೆದಿರ್ದ
ಸಲ್ಲಲಿತೆ ಮಾಯಿದೇವಿಯ ಪುತ್ರಿಯಾಗಿರ್ದ
ಚನ್ನ ರೇವಣದೇವಿಯುನ್ನರಸಿ ಸೆರೆ ವಿಡಿಯೆ
ಕನ್ನೆ ಬಾಯುಂ ಬಿಡುತ್ತಲ್ಲಿ ತಾಯುಂ ಕರೆಯೆ
ಜನನಿ ಬಸಿರಂ ಹೊಸೆದುಕೊಂಡಿಡೆಲ್ಲಿಯು ಮಾರಿ
ನಿನಗೆ ಬಂದುದೆ ಮಾಸನೂರ ಸುರಿಗಿಯ ಬಾರಿ
ಎಂದೊಟ್ಟೆಯೊರಲುತ್ತಲಿನ್ನಾರ್ಗೆ ಪೇಳ್ದಪೆಂ
ಸಂದ ಭೂಪಂ ತಾನೆ ಪಿಡಿಯಲಾರ್ಗೆಂದಪೆಂ

ಗುರುವಿಂಗೆ ದೂರುವೆಂ ತಾನಾದುದಕ್ಕೊಂದು
ಕರೆವುತಿರ್ದಳ್ಜಗನ್ಮ್ರಯು ರೂಪನಂ ನಿಂದು
ಕೈಯೆತ್ತಿ ಕಣ್ಣೀರ ಹೊನಲಿನಿಂ ನೆನೆವುತ್ತೆ
ಸುಯ್ಯೊಡನೆ ಶೋಕ ರವಮಂಬರವನಡರುತ್ತೆ
ಇರೆ ಕರೆದಳೆನ್ನೈಯ್ಯ ಎನ್ನ ರೇವಣಸಿದ್ಧ
ಕರುಣಿ ಎಂಬರಲಯ್ಯ ನಿನ್ನನಚಲಿತ ಸಿದ್ಧ
ನಿನಗೊಪ್ಪಿಸದೆ ಸುರಗಿಗೊಪ್ಪಿಸಿದ ತೆರನಾಯ್ತು
ನಿನಗೆ ಹೆಸರಾದ ಹಸುಳೆಗೆ ಸುರಗಿಗೆರೆಯಾಯ್ತು
ಎನ್ನ ಕಣ್ಗಳ ಸಿರಿಯೆ ನಿನ್ನ ಪದಮಂ ತೋರ
ಎನ್ನ ಪುಣ್ಯದ ಪುರುಳೆ ನಿನ್ನಂಘ್ರಿಯಂ ತೋರ
ಎಂಬ ರವವಡರ್ದು ವಾರಣಾಸಿಯುಂ ತೀವಿತ್ತು
ಇಂಬಿನಿಂ ಘನ ಸಿದ್ಧಪತಿಯ ಕಿವಿದಾಗಿತ್ತು

ಕಿವಿದಾಗಲನುಕಂಪದಿಂದೆ ನೆರೆ ಬೆಚ್ಚುತಂ
ಶಿವಶಿವ ಮಹಾದೇವನೇನೆಂಬೆನದ್ಭುತಂ
ಬಂದು ಮಂಗಳವಾಡದೊಳಗಿಳಿಸಿದಂತಿರ್ದು
ಇಂದುಮುಖಿ ಮಾಯಿದೇವಿಯು ಮುಂದೆ ನಿಂದಿರ್ದು

ಇರೆ ಕಂಡು ಕಂಡು ಮತ್ತಂತಳಲ್ಗಳು ಪುಟ್ಟೆ
ಹರಮೂರ್ತಿ ಯೆನಿಪ ಸಿದ್ಧನ ಪಾದದೊಳಗೊಟ್ಟೆ
ಅಳಲುತಂ ತಂದೆ ರೇವಣದೇವಿಯುಂ ಕಂಡು
ಅಳವಳಿಯುಲಿಳಿದೊಯ್ದು ಸುರಗಿಗಿಕ್ಕಲ್ಕೊಂಡು
ಎಂತು ಮಾಡುವೆನೆನುತ್ತಿರ್ಪಳಂ ಸಂತೈಸಿ
ಸಂತತಂ ಮಾಯಿದೇವಿಯನಲ್ಲಿ ಬೋಳೈಸಿ
ನಿನ್ನ ಮಗಳೊಬ್ಬಳೀಕೆಲ್ಲರಂ ಬಿಡಿಸುವೆಂ
ಎನ್ನ ಪರಿಯಂ ನೋಡು ನೋಡು ಪೊಸತೆನಿಸುವೆಂ

ಎಂದು ಬಿಜ್ಜಳನ ಸಭೆಗೈತಂದನಾ ಸಿದ್ಧ
ಇಂದುಧರ ನಿಜಯೋಗಿ ನಿಂದನನುಪಮ ಸಿದ್ಧ
ನಿಲೆ ಕಂಡು ಬಿಜ್ಜಳಂ ಶಿವಸಿದ್ಧನೆಂದರಿದು
ಚರಿತದಿಂದಿದಿರೇಳ್ದು ಚರಣದೊಳ್ ಬೀಳ್ದೊಸೆದು

ಭದ್ರಾಸನದೊಳಿರಿಸಿ ಚರಣ ತಳವಂ ತೊಳೆದು
ಸದ್ರೂಪಿನಿಂದ ಪಾದೋದಕಮುಮಂ ತಳೆದು
ಕೈ ಮುಗಿದು ನಿಂದಿರ್ದ ದೇವ ಬೆಸನಾವುದೆನೆ
ಪ್ರೈಮೆಯಿಂ ನುಡಿವನಾ ಸಿದ್ಧನಿದು ತಪ್ಪು ಎನೆ
ಏಕೆ ಮರುಳಾದೆ ಕಪ್ಪರನ ನುಡಿಗೆಲೆ ಭೂಪ
ಲೋಕದೊಳು ಕನ್ನಿಕೆಯರಂ ಕೊಲ್ವುದತಿ ಪಾಪ
ಆವನುಂ ತಡೆಯುಬರ್ಪುದೆ ಸುರಿಗಿಯುಜ್ವಳಂ
ಸ್ತ್ರೀ ವಧೆಯುಮಪಕೀರ್ತಿಯುಂ ಸಾವರ್ದಗ್ಗಳಂ
ಬಿಡು ಬಿಡೆಂದಾ ಕುಮಾರಿಯರೆಲ್ಲರಂ ಬಿಡಿಸಿ

ನಡೆ ನಿನಗೆ ಸುರಿಗಿದೋರುವೆನೆಂದೊಡಂಬಡಿಸಿ
ಪೊರಮಟ್ಟನಪ್ರತಿಮಸಿದ್ಧನಾ ಪುರದಿಂದೆ
ನೆರೆ ಪೊಗಳುತಿರೆ ಭುವನ ಜನವೆಲ್ಲ ಮುದದಿಂದೆ
ಹಿಂದೆ ಬಿಜ್ಜಳ ನೃಪಂ ಮುಂದೆ ರೇವಣಸಿದ್ಧ
ನಂದು ಬರುತಿರ್ದ ನಿರವಯದ ನಿರ್ಮಳ ಸಿದ್ಧ
ಒಡನೆ ಗಜ ತುರಗ ಪದಾತಿಬಲವೆಯ್ದೆ ಬರೆ
ಪೊಡೆವ ನಿಸ್ಸಾಳ ರವವಂಬರವನಡರುತಿರೆ
ನಡೆತರುತ್ತಂ ಮಾಸನೂರ ಮುಂದಂ ನಿಂದು
ಪೊಡವಿ ಭಾಪೆನುತಮಿರೆ ಗಜದಿಂದಲಿಳಿತಂದು
ಒಂದೊಂದು ಹರಿಗೋಲರೊಬ್ಬೊಬ್ಬರೇರುತುಂ
ಅಂದು ರೇವಣಸಿದ್ಧನುಂ ನೃಪತಿ ಏರುತುಂ
ನದಿಯಲ್ಲಿ ಸುರಿಗಿ ಇರ್ದಲ್ಲಿಗೇ ನಡೆತಂದು
ಅದಿರದಳುಕದೆ ಸಿದ್ಧನಾನಂದದಿಂ ನಿಂದು
ಆಲಗಿನಾಯುಧದೊಳಗೆ ಕೈಯಿಕ್ಕಿ ಬರಸೆಳೆಯು
ಉಲಿದು ಹಲುಮೊರೆಯು ಗರ್ಜಿಸುತ ಲಗು ಮಿಗೆ ಪೊಳೆಯೆ
ಕಂಡಾ ನೃಪತಿ ನೋಡು ನೋಡೆಂದು ತೋರುತಿರೆ
ಕಂಡು ಪಿಡಿಯಲ್ಕೆಂದು ನೃಪತಿ ಕೈ ನೀಡುತಿರೆ
ಐದು ಹೆಡೆಗಳನು ಹಾವಾಗಿ ಸಲೆ ಭುಸ್ಸೆನಲು
ಪೈದೆಗೆದು ವಿಷದ ಶಿಖಿ ತಾಗೆ ಮಿಗೆ ಜುಮ್ಮೆನಲು
ಬಿಜ್ಜಳಂ ಹರಿಗೋಲ ಮೇಲೆ ನೆರೆ ಹಮ್ಮೈಸಿ

ಬಿಜ್ಜಳಂ ಸಿದ್ಧರೇವಣನಲ್ಲಿ ಸಂತೈಸಿ
ಏಳುತಲಗಂ ಕಂಡು ಬಿಡು ದೇವ ಬಿಡು ದೇವ
ಆಳವುಳ್ಳಲ್ಲಿರಿಸು ಬೇಗವಿರಿಸೆಲೋ ದೇವ
ಎನೆ ನಗುತ ಸಿದ್ಧನಾ ಸುರಿಗಿಯುಂ ಮತ್ತಿರಿಸಿ
ಬಿನದದಿಂ ಬಿಜ್ಜಳಂ ಬೆರಸಿ ತಡೆಗವತರಿಸಿ
ಗಜಮಸ್ತಕವನೇರಿ ನಗರಿಗಭಿಮುಖನಾಗಿ
ಭಜಿಯಿಸುವ ಪುರಜನದ ಪರಕೆಗಾನತನಾಗಿ
ಬಂದು ಬಿಜ್ಜಳನರಮನೆಯನೊಪ್ಪದಿಂ ಪೊಕ್ಕು
ನಿಂದು ರೇವಣಸಿದ್ಧ ತಂದೆಗೆ ಮನಂ ಮಿಕ್ಕು
ತನ್ನ ಮಗಳಂ ವಿಭವದಿಂದೆ ಮದುವೆಯ ಮಾಡಿ
ಉನ್ನತವೆನಿಪ್ಪ ರೇವಣಸಿದ್ಧನೊಳ್ಕೂಡಿ
ಆನೆಯುಂ ಕುದುರೆಯುಂ ಬಳುವಳಿಯನೊಲಿದೀಯೆ
ನಾನಾ ಪದಾತಿಯುಂ ಸುಖಮುಖದೊಳೊಲಿದೀಯೆ
ಸಿದ್ಧ ಕುಲಶೇಖರಂ ಸಂಪದದೊಳೊಪ್ಪಿದಂ
ಸಿದ್ಧ ರೇವಣ ತಂದೆ ಜಗವರಿಯಲೊಪ್ಪಿದಂ

**ತೃತಿಯ ಸ್ಥಲ ಸಂಪೂರ್ಣಂ.**

---

# ಚತುರ್ಥಸ್ಥಲ

→※*※←

**ವೃತ್ತ**:— ನಿರುಪಮ ಸಿದ್ಧನ ಪ್ರತಿಮ ಸಿದ್ಧನ ಚಿಂತಿತ ಸಿದ್ಧಸು ತ್ತ್ರಮಾ। ವರಣ ಶರೀರ ಸಿದ್ಧನತಿ ಕಾರಣಿಕ ಸಿದ್ಧನ ಶೇಷಮಂ ಸಮು। ದ್ಧರಿಸುವ ಸಿದ್ಧನಾತ್ಮ ನಿಜ ಸಿದ್ಧನ ಮಾನಪರಾಪರೈ ಕವಿ ಸ್ತರಕರ ಸಿದ್ಧ ನೊಪ್ಪಿದ ನಿಳಾತಳದೊಳ್ಗಲೆ ಸಿದ್ಧರೇವಣಂ॥

**ಗದ್ಯ**:— ಇಂತಪ್ಪ ಕಂತುಹರರೂಪಂ ಶಿವಲಿಂಗಸಿಪ್ತಂ ಮಂಗ ಳವಾಡದೊಳ್ ಕೆಲವು ದಿನಂ ರಾಜ್ಯ ಸುಖದೊಳಿರ್ದು ಸಿದ್ಧಕುಲಕಮಲ ಕಮನೀಯ ಭಾಸ್ಕರನೆನಿಪ ರೇವಣಸಿದ್ಧಂ ಪುರಮಂ ಪೊರಮಟ್ಟು ಬಿಜ್ಜಳಂಗೆ ಬೀಳ್ಕೊಟ್ಟು ದಕ್ಷಿಣಾಭಿಮುಖನಾಗಿ ಕರಿಘಟೆಗಳುರವಣಿಸೆ ತುರಗಚಯಂ ಒತ್ತರಿಸೆ ಪದಾತಿಬಲಂ ಪಡಿಸಲಿಸೆ ನಿಸ್ಸಾಳಧ್ವನಿಯುಣ್ಮೆ ಕಹಳಾರವಂ ಪೊಣ್ಮೆ ಪಲವಸೆಡೆಗೈದು ಸಕಲಜನಕ್ಕೆ ಸುಖಮನೀವುತಂ ನಡೆತಂದು ಮನಂಮಿಕ್ಕ ಚೋಳದೇಶಮಂ ಪೊಕ್ಕು ರಾಜೇಂದ್ರ ಚೋಳನಂ ಕಾಣಿಸಿಕೊಂಡು ಕರುಣಮನಿತ್ತು ಘನವಿಸ್ತರಮಪ್ಪ ನಿಳಯದ ಸಿಂಹ ವಿಷ್ಟರಕ್ಕೆ ಬಿಜಯಂಗೈದು ಚೋಳನ ಕುಮಾರಿಯ ವಿವಾಹ ಮಾಗೆ ಚೋಳಮಹಾರಾಜನಿಂ ಪೊಡಮಡಿಸಿಕೊಳುತ್ತಂ ಶಿವಭಕ್ತರಿಂ ವಂದಿಸಿಕೊಳುತ್ತಂ ಆ ದೇಶದ ಪಲವು ಶಿವಪುರಂಗಳಂ ನೋಡುತ್ತಂ ತಿರುಗಿ ಪೊರಮಟ್ಟು ಚೋಳಂ ಕೊಟ್ಟ ಬಳುವಳಿಯ ಚತುರಂಗ ಬಲ ವೆರಸಿ ತಿರಿಗಿ ಚೇರ ಮಲೆಯಾಳ ಗೌಳ ಗುಜ್ಜರ ನೇಪಾಳ ಮೊದ ಲಾದ ದೇಶಂಗಳಂ ಪೊಕ್ಕಲ್ಲಲ್ಲಿಯ ರಾಜಪುತ್ರಿಯರಂ ಪರಿಣಯ ಮಾಗಿ ಮನಃಪೂರ್ವಕದಿಂ ಸ್ವೀಕರಿಸಿ ತಟಾಕಂಗಳಂ ಕಟ್ಟಿಸುತ್ತಂ ಶಿವ ಪುರಂಗಳಂ ಮಾಡಿಸುತ್ತಂ ಛತ್ರಂಗಳಂ ನಿರ್ಮಿಸುತ್ತಂ ಕುರುಡರ್ಗೆ ಕಣ್ಗಳಂ ಹೆಳವರ್ಗೆ ಕಾಲ್ಗಳಂ ಬಂಜೆಯರ್ಗೆ ಮಕ್ಕಳಂ ಕೆಟ್ಟರಸು ಮಕ್ಕಳ್ಗೆ ರಾಜ್ಯಮಂ ಕಂಡ ಕಂಡ ಬಡವರ್ಗೆ ಸಂಪದಂಗಳಂ ನೀವು ತ್ತ್ರಂತಿವು ಮೊದಲಾದ ಪುಣ್ಯ ಲೀಲೆಗಳನಲಂಕರಿಸುತ್ತೆ ಜಗದ್ಧಿತಾರ್ಥ ಮೂರ್ತಿ ಮಂಗಳವಾಡಕ್ಕೆ ಮರಳಿ ಬರ್ಪಾಗಳ್

ಸಿದ್ಧಸಮಯಚಕೋರ ಚಂದ್ರಿಕಾಯಮಾನನೆಂಬ ಸಿದ್ಧಕುಲಚಾತಕ ಸುಧಾವರ್ಷನೆಂಬ ಪರಸಮಯ ಕುಮುದ ಕಮಲ ಸಖನೆಂಬ ಸಾಮರ್ಥ್ಯ

ಸಾಗರನೆಂಬ ಶಿವಭಕ್ತಿವನವಸಂತನೆಂಬ ಶಿವಪೂಜಾರಾಜನೆಂಬ ಶಿವಯೋಗಿಲಲಾಮನೆಂಬ ತನ್ನ ಬಿರುದಿನ ಕಹಳಾರವಂ ದಿಕ್ತಟವುಂ ಧೀಂಕಿಡೆ ಸರ್ವಸಂಭ್ರಮದೊಳ್ ಬರ್ಪಾಗಳ್ ಮಂಗಳವಾಡದೊಳ್ ಗುಡಿಗಟ್ಟಿ ಸಕಲಪರಿಜನ ಸಹಿತಂ ಬಿಜ್ಜಳರಾಯನಿದಿರ್ಗೊಂಡು ಮೆಯ್ಯಿಕ್ಕಿ ಕಾಣಿಕೆಯನಿತ್ತು ಕೆಯ್ಮುಗಿದು ನಿಂದಿರೆ ಪರಿಸುತ್ತಂ ವಿಭೂತಿಯಂ ಕರುಣಿಸಿ ಕೊಟ್ಟರಮನೆಗೆ ಬಿಜಯಂಗೈದು ಸಿಂಹಾಸನಾರೂಢನಾಗಿ ಬಹಿರ್ಭಾವದ ಮಾಯಾ ಸುಖದುಃಖದ ಸಂಭ್ರಮಂ ಶರೀರಕ್ಕಾಗುತ್ತಮಿರೆ ನೋಡುತ್ತಂ ನಿರ್ಲೇಪನಾಗಿ ಸಾಕ್ಷಿಯಾಗಿ ಪರಮಗುರು ನಗುತ್ತನೇಕ ಕಾಲದೊಳುರುಗ ಲೋಕದೋಳ್ ನರಲೋಕದೋಳ್ ಸುರಲೋಕದೋಳ್ ಸುಖದೊಳಿರ್ಪ ಜಗದ್ಭರಿತನಪ್ಪ ಸಿದ್ಧರೇವಣದೇವಂ ನೋಡಿದುದೆ ಜಗತ್ಪಾವನಂ ಮುಟ್ಟಿದುದೆ ಪರುಷಂ ಮೆಟ್ಟಿದುದೆ ದಿವ್ಯಕ್ಷೇತ್ರಂ ನಡೆದುದೆ ಪುಣ್ಯಮಾರ್ಗಂ ನುಡಿದುದೆ ಪರಮತತ್ವಂ ಇರ್ದುದೇ ದೇವಸಭೆ ಸಾರ್ದುದೇ ಸುರತರುವೆನಿಪ್ಪ ನಿರ್ಮಳಕೀರ್ತಿಯಂ ಪಡೆದು ಶಿವಪ್ರತಾಪಸಿದ್ಧನನವರತಂ ಧರ್ಮತತ್ಪರಂ ಸಂತೋಷದೊಳಿರ್ದೊಂದುದಿನಂ

ಸುಕೃತ ಲೀಲಾಲೋಲಹೃದಯಂ ಮಂಗಳವಾಡದ ಪೊರಪೊಳಲ ನಂದವನಮಂ ನಿರೀಕ್ಷಿಸುತ್ತೆ ಬರುತ್ತೊಂದು ನಿರುಪಮವಹ ತಟಾಕಸ್ಥಲಮಂ ಕಂಡಿಲ್ಲಿ ಸಕಲ ಪ್ರಾಣಿಗಳ್ಗೆ ಹಿತಕರಮಪ್ಪ ತಟಾಕಮಂ ನಿರ್ಮಿಸಲ್ವೇಳ್ಕುಮೆಂದಪ್ರತಿಮ ಧರ್ಮ ಮೂರ್ತಿ ನೆನೆದು ನೋಡಿ ತನ್ನ ಕೆಲಬಲದೊಳಿರ್ದ ಕಲ್ಗಳಂ ಮುಟ್ಟಿ ಹೊನ್ನರಾಶಿಯಾಗೆ ಪುರಜನಮಂ ಬರಿಸಿ ಕನಕಮನಿತ್ತು ತಟಾಕ ಪ್ರಾರಂಭ ಕರ್ತೃತ್ವಂ ತಮ್ಮದಪ್ಪ ಕಾರಣದಿಂ ವಾರಣ ಚರ್ಮ ವಸನತನುಜಂ ರೇವಣಸಿದ್ಧಂ ಭೂಮಿಯಂ ಶೋಧಿಸಿ ಧರ್ಮವಂ ಬಿತ್ತುವಂತೆ ಗುದ್ದಲಿಯಂ ಪಿಡಿವಗೆಯಲ್ತೊಡಗಲ್ಪೆಂಡಿರೆಲ್ಲಂ ಮಣ್ಣಾದ ಸಿವುಡಂ ಪೊತ್ತು ಪಾಪಮಂ ಪೊರಸೂಸುವಂತೆ ಮಣ್ಣ ಸೂಸುವ ಪಥದೋಳ್ ವಾಸಿಗೆ ಗಾಸಿಯುಪ್ಪ ಚೋಳನ ಕುಮಾರಿ ಸೌಕುಮಾರ್ಯಮಂ ನಟಿಯಿಸುತ್ತೊಲ್ಲದೆ ಮೂರು ತಿಂಗಳ ಗರ್ಭದ ನೀರೆ ನಿಂದು ದೇವದೇವ ಚೋಳರಾಜೇಂದ್ರನ ಬಸಿರೋಳ್ಬಂದು ದಿವ್ಯ ಜ್ಞಾನಿಯಪ್ಪ ನಿಮ್ಮಡಿಗಳ್ಗರಸಿಯಾಗಿಯುಮಿಂತಪ್ಪ ನಿರೋಧಕ್ಕೆ ಪಕ್ಕಾಗಲಾರೆನೆಂಬ ನುಡಿಗೇಳ್ದು ನಸುನಗುತಯ್ಯೋ ಹಿಂದೆ ಮಾಡಿದ ಪುಣ್ಯವಿಂದಿನ ಸುಕುಮಾರತೆಯನಿತ್ತುದಿಂದಿನ ಪುಣ್ಯವೇನಂ ಮಾಡದು ನೀನಾರಾದೊಡೆನ್ಮೊಡವೆಯನೆಮಗೆ ಕೊಟ್ಟು ಪೋಗೆಂದು

ನುಡಿಯೆ ಕುಡಲುಂ ಬಿಡಲುಂ ಅರಿಯದಿರ್ಪ ಮುಗ್ಧೆಯುಂ ಕಂಡು ಕರುಣಿಸಿ ಸಾಮರ್ಥ್ಯ ಸುಲಭಂ ಸಕಳ ಜೀವಂಗಳುತ್ಪತ್ತ್ಯ ಕರ್ತನಪ್ಪ ರೇವಣಸಿದ್ಧಂ ತನ್ನ ಕರತಳದಿಂದಾ ಲಲನೆಯ ಪುಣ್ಯೋದರಮನೊಯ್ಯನೆ ತಡವೆ ಪುಣ್ಯದುರುಳಿ ಬೀಳ್ವಂತೆ ಬಾಲಕಂ ಗರ್ಭದಿಂ ಧೋಂಕೆನೆ ಬೀಳೆ ಮುಂತಣಿಸಿ ತೆಗೆದು ಶಂಕರನಂ ನೆನೆದು ಸಾರಹೃದಯಂ ಮಾರಾರಿಯಣುಗನೇರಿಯ ಮೇಲಣ ನಿವಾಸಸ್ಥಲದೊಳಾದರದಿಂದಿರಿಸಿ ಭಸಿತಮಂ ಕಾಪಿಟ್ಟು ಶಿವಧ್ಯಾನದಿಂ ಮುಸುಂಕಿಟ್ಟು ಜ್ಞಾನನಿಧಾನಮಂ ಚಿತ್ತಭೂಮಿಯೊಳ್ ಬೈಚಿಡುವಂತೆ ಬೈಚಿಟ್ಟು ತಾಯಗರ್ಭದಿಂ ನೂರ್ಮಡಿ ರಕ್ಷೆಯಾಗಿರೆ ರೇವಣಸಿದ್ಧಂ ಚೋಳ ಪುತ್ರಿಯುಂ ದಕ್ಷಿಣ ದೇಶಕ್ಕೆ ಕಳುಪಿ

ಜ್ಞಾನನಿಧಿ ಮಹಿಮಾಂಬುರಾಶಿ ಧರ್ಮಧ್ವಜಂ ದಯಾ ಮೇರು ಸತ್ಯಭೂಷಣನಸುನಯದಿಂದಾರನೆಯ ಮಾಸಕ್ಕೆ ತಟಾಕಂ ಪೂರ್ಣಮಾಗ ತತ್ತಟಾಕ ಪೇಳಾಗ್ರದೊಳಿರಿಸಿದ ಬಾಲಗರ್ಭಕ್ಕೆ ನವಮಾಸಂ ತೀವಿತೆಂಬುದನರಿದು ರೇವಣಸಿದ್ಧಂ ಪುತ್ರೋತ್ಸಾಹಕ್ಕನುಕೂಲಮೆನಿಪ ಮೃದು ಮೃದಂಗ ಮಂಗಳ ಕಲಶ ದರ್ಪಣಾರತಿ ಸುವಾಸಿನಿ ಜನಂ ಬೆರಸಿ ಪಟ್ಟಣದಿಂ ಪೊರಮಟ್ಟು ಬಂದು ಕೆರೆಯ ಏರಿಯ ಮೇಲೆ ಮುನ್ನಿರಿಸಿದ ಮುಚ್ಚಳಂದೆಗೆಯೆ ಭಕ್ತಿ ಭೂಮಿ ಜ್ಞಾನರಸದಿಂ ತೊಯ್ದು ಬೀಗ ಬೆಳೆದ ಶಿವಕಳಾಬೀಜದಿಂ ನಳನಳಿಸಿ ಬೆಳೆದ ಶಿವಜ್ಞಾನಾಂಕುರದಂತೆ ತೊಳತೊಳಪ ಬಾಲಕನಂ ಕೈಯಲಿಡೆಗೊಟ್ಟು ಭೂಮಿದೇವಿಯಕೈರ್ಯ್ಯೊಳೀಸಿಕೊಂಬಂತೆ ತೆಗೆದುಕೊಂಡು ಕೃಪೆಯಿಂ ನೋಡಿ ಮೋಹದಿಂ ಮುಂಡಾಡಿ ಮೂರ್ಧ್ನಿಘ್ರಾಣಮಂ ಮಾಡಿ ತಾಯಗರ್ಭದಿಂ ಬರ್ಪನೋವನರಿಯದ ದುಃಖಮಂ ನೀಗಿ ಪುಟ್ಟಿದನಾಗ ರುದ್ರಮುನಿದೇವನೆಂಬ ನಾಮಕರಣಮಂ ಮಾಡಿ ಪುರಕ್ಕೈತಂದು ತಮ್ಮರಸಿಯೋರ್ವಳ್ಪುಣ್ಯವನಿತೆಯ ಕೆಯ್ಯೊಳ್ಕುಡೆ ಬಾಲಚಂದ್ರನಂ ಗಗನಾಂಗನ ಸಲಹುವಂತೆ ತರುಣ ತರಣಿಯಂ ಪೂರ್ವದಿಶಾಂಗನೆ ಬೆಳೆಯಿಸುವಂತೆ ಸಾಗಿಸುತ್ತಿರಲೆಂಟನೆಯ ವರುಷದೊಳ್ ಮಗನಂ ನೋಡಿ ಮಿಗೆ ಸಂತಸಂ ಬಟ್ಟು ಶೈವೋಪದೇಶಮಂ ತಾನೆ ಕರುಣಿಸಿ ಕೃಪೆಯಿಂ ನಿರೀಕ್ಷಿಸಿ ರುದ್ರಮುನಿದೇವರ್ಗೆ ಪರಮ ಸ್ವರೂಪ ಜ್ಞಾನಬೋಧೆಯಂ ಬೆಸಸುತ್ತಂ ಶಿವಯೋಗ ಸಂಪನ್ನನೆನಿಪ ರೇವಣಸಿದ್ಧ ಮಂಗಳವಾಡದೊಳಿರ್ದನಂತುಮಲ್ಲದೆಯುಂ.

**ಚತುರ್ಥಸ್ಥಲ ಸಂಪೂರ್ಣಂ.**

## ಪಂಚಮಸ್ಥಲ.

ವೃತ್ತ:— ನಯದಿಂದಂಪ್ರಿಯದಿಂದೆ ರುದ್ರಮುನಿದೇವಂಗಳ್ಕರಿಂ ಶೈವದೀ-
ಕ್ಷೆಯನಿತ್ತಾನತವೃಂದ ಮೋಕ್ಷದನಸೂನ್ಯೈಶ್ವರ್ಯ ಸಂಯುಕ್ತನ-।
ವ್ವಯಸಿದ್ಧಂ ಶಿವಭಾವಸಿದ್ಧನವನೀಶಂ ಪೂಜ್ಯಸಿದ್ಧಂ ನಿರಾ-।
ಶ್ರಯಸಿದ್ಧಂ ವಿಭುಸಿದ್ಧ ರೇವಣ ಶಿವಂ ಸಂದಿರ್ದನಾಸ್ಥಾನದೊಳ್ ॥

### ರಗಳೆ

ಅಂತಿರ್ದು ಮತ್ತೆ ದಿಗ್ದೇಶಾಂತರಕ್ಕೆಂದು
ಸಂತಸದಿ ಪೊರಮಟ್ಟನತುಳ ಬಲಯುತನಂದು
ಕರಿತುರಗ ಕಾಲಾಳು ರಥ ನಿಕರ ಒಡನೆ ಬರೆ
ಧರೆ ನಡುಗೆ ನಿಸ್ಸಾಳ ರವ ಉಣ್ಮಿ ಪೊಣ್ಮುತಿರೆ
ನಡೆತಂದನಂಗಂ ಕಳಿಂಗದೇಶಂಗಳೊಳ್
ನಡೆ ತಂದು ಗೌಳ ಮಾಳವ ಮಳೆಯ್ಯ ದೇಶದೊಳ್ ಮಲೆ
ಸಕಲ ದೇಶಂಗಳೊಳ್ಸುಖದಂತೆ ಸುಳಿವುತುಂ
ಸುಕರವೆನೆ ಭೂಜನಕೆ ಸಖನಂತೆ ಸುಳಿವುತುಂ
ಶಶಿಯಂತೆ ಸಿರಿಯಂತೆ ಸುಧೆಯಂತೆ ಸುಳಿವುತುಂ
ಎಸೆವ ಸುರಧೇನು ಸುರ ಕುಜದಂತೆ ಸುಳಿವುತುಂ
ವರ ಸುಕೃತದಂತೆ ಸತ್ಯದ ತೆರದಿ ಸುಳಿವುತುಂ
ಉರು ಶಾಂತಿಯಂತೆ ನಿತ್ಯದ ತೆರದಿ ಸುಳಿವುತುಂ
ಧರೆಯೊಳಗನಂತ ದೃಷ್ಟಾಂತಮುಂ ತೋರುತುಂ
ಹರುಷದಿಂ ಪಲವು ಸಾಮರ್ಥ್ಯಮುಂ ಬೀರುತುಂ
ಬರುತಿರ್ದನತ್ತಲಾ ಸಿದ್ಧರೇವಣತಂದೆ

ಧರಣಿಯೊಳಗಿತ್ತಲೊರ್ಬಂ ಶರಣನೊಲವಿಂದೆ
ಎಸೆವ ಹಾವಿನಹಾಳೆನಿಪ್ಪಗ್ರಹಾರದೊಳ್
ಪೆಸರೆಸೆವ ಕಲ್ಲೈಯ್ಯನೆಂದೆನಿಪ ನಾಮದೊಳ್
ಆ ಊರ ಕಲಿದೇವರಲ್ಲಿ ಸಲೆ ಮೆಚ್ಚಾಗಿ
ಭಾವದಿಂದರ್ಚಿಸುತ್ತಿರ್ದನುನ್ನತವಾಗಿ

ಇರ್ದುದಿ ಪರಮಸ್ನೇಹವಂಕುರಿಸುತುರ್ಬುತಂ
ಸಾರ್ದುದಿ ಶಿವಚರಣದೊಳ್ ಪಲ್ಲವಿಸುತುರ್ಬುತಂ
ಶ್ರೀಗುರು ಪದಂಗಳಂ ಬಯಸಿರ್ಪ ಸಮಯದೊಳ್
ನಾಗಭೂಷಣನ ಮೆಲ್ಲಡಿಯರಿವ ಸಮಯದೊಳ್
ಈ ಬಂದನತಿಬಳಂ ಸಿದ್ಧರೇವಣನೆಂಬ
ಈ ಬಂದನಮ್ಮಮ್ಮ ಸಿದ್ಧಕುಲಪತಿ ಯೆಂಬ
ಕಹಳೆಗಳ ಧ್ವನಿ ಬಂದು ಕಲ್ಲಯ್ಯನೋಳ್ಪುಗಲು
ಬಹು ವಿಧದ ಪುಳುಕ ತತಿ ತನ್ನ ಮನದೊಳ್ನಿಲಲು
ಮಾಯೆಯುಂ ಪಿಂಗಿ ಶಿವಪದಕೆ ಧೀಂಕಿಡುವಂತೆ
ಆಯತಿಕೆಯಿಂದೆ ಭವಚಲವನುತ್ತರಿಪಂತೆ
ಗಳಗಳನೆ ಪರಿತಂದು ರೇವಣಸಿದ್ಧನಂಘ್ರಿಯುಂ
ತೊಳತೊಳಪ ಸದ್ಗತಿಯ ತೋರುತಿರ್ಪಂಘ್ರಿಯುಂ
ಬಿಗಿದಪ್ಪಿಯಾನಂದ ಜಲದಿಂದೆ ತೊಳೆವುತಿರೆ
ತೆಗೆದಪ್ಪಿ ಪುಳಕಂಗಳಿಂ ಪೊದೆಯಿಸುತ್ತಮಿರೆ
ಏಳೈಯ್ಯ ಕಲಿದೇವ ನಿನಗೆ ಲೇಸಕ್ಕುಮೆನೆ
ಏಳೈಯ್ಯೆ ನಿನ್ನಯ ಮನೋರಥವನೀವೆನೆನೆ
ಏಳ್ದು ಕೈಮುಗಿದಿರ್ದ ಕಲ್ಲಯ್ಯನಂ ಕಂಡು
ತಾಳ್ದು ಕಾರುಣ್ಯಮಂ ಭಕ್ತಿಗೆ ಮನಂಗೊಂಡು
ರುದ್ರಮುನಿದೇವನಿಂ ಕರುಣಮಂ ಮಾಡಿಸುತೆ
ರುದ್ರನಣುಗಂಗೆ ಶೈವದೀಕ್ಷೆಯುಂ ನೀಡಿಸುತೆ
ಕಲ್ಲಯ್ಯನಂ ತತ್ಪುರಕ್ಕೆ ಕರುಣಿಸಿ ಕಳುಪಿ
ಎಲ್ಲ ತೆರದಿಂದೆ ಭವಬಂಧನಂಗಳ ನಿಳಿಪಿ

ತನ್ನ ಮನದೊಳ್ಸಿದ್ಧರೇವಣಂ ನಡೆ ನೋಡಿ
ಪನ್ನಗಾಭರಣನಿತ್ತಾಜ್ಞೆ. ನೆರೆ ಕೈಗೂಡಿ
ಅರಿತೇಳುನೂರರಿಯದೇಳ್ನೂರು ವತ್ಸರಂ
ನೆರೆ ಸಂದುದಿನ್ನಿಳೆಯೊಳಿರಲಾಗದೀಶ್ವರಂ
ಕೊಟ್ಟುದಾಯ್ತೆಂದಲ್ಲಿ ಚಿಂತಿಸುತೆ ಬರವರಲ್
ನಿಷ್ಠೆಯಿಂ ಸಿದ್ಧರೇವಣತಂದೆ ನಡೆತರಲ್

ಸಂದ ಸೊನ್ನಲಿಗೆಯಿಂದೊಲಿದು ಚಾಮಲದೇವಿ
ಮುಂದೆ ವೈಯ್ಯಕ್ಕತಂ ಬಂದು ಗುರುಪದಭಾವಿ
ತನ್ನ ಗುರುವಂ ಕಂಡು ಚನ್ನಗುರುವಂ ಕಂಡು
ಉನ್ನತ ಶಿವಜ್ಞಾನಕಲ್ಪತರುವಂ ಕಂಡು
ಕೃತಕೃತ್ಯೆಯಾಗುತಂ ಕೈಮುಗಿದು ನಿಂದಿರಲು
ಅತಿಶಯಜ್ಞಾನಿ ಸಿದ್ಧನ ಮುಂದೆ ನಿಂದಿರಲು
ಕಂಡು ಕರುಣವನಾಕೆಗೀವುತ್ತೆ ಓವುತ್ತೆ
ಅಂಡಲೆವ ಮಾಯೆಯಂ ಸೋವುತ್ತೆ ಕಾವುತ್ತೆ
ಆಸೆಯಿಂದಿಳಿವುತಂ ಸಿದ್ಧರೇವಣತಂದೆ
ಸೇನೆಯಂ ಪೊರಗೆ ನಿಲವೇಳುತ್ತೆ ತಾ ಮುಂದೆ
ಹೊನ್ನ ಹಾವುಗೆಗಳಂ ಮೆಟ್ಟಲಮ್ಮದೆ ಕಳೆದು
ತನ್ನ ಮನದೊಳಗೆ ಭಯಭಕ್ತಿರಸಮಂ ತಳೆದು
ಚರಣದಿಂ ನಡೆಯೆ ಚಾಮಲದೇವಿ ಕಾಣುತುಂ
ಧರಣಿಗಿದು ಪೊಸತೆನುತೆ ಕೌತುಕಮನಾಳುತುಂ
ದೇವ ಏನೆಂಬ ಪರಿ ಕರುಣಿಸುವುದಿದನೆಮಗೆ
ದೇವ ದಿವ್ಯಾಂಘ್ರಿಯಿಂ ನಡೆವುದದ್ಭುತವೆನಗೆ
ಎನೆ ಕೇಳು ಮಗಳೆ ಶಿವಲಿಂಗವಾದಪುದಿಲ್ಲಿ
ಘನಮಹಿಮೆಯುಳ್ಳ ಶಿವಭೋಗವಾದಪುದಿಲ್ಲಿ
ಇಲ್ಲಿ ಮೊರಡಿಯ ಮುದ್ದುಗೌಡನರ್ಧಾಂಗಿಯೊಳು
ಸಲ್ಲಲಿತೆ ಸುಗ್ಗವ್ವೆ ಎಂಬ ಕಾರಣಿಕೆಯೊಳು
ಕಾರಣಿಕ ಸಿದ್ಧನುದಯಿಸುವನೊಬ್ಬಂ ಕೇಳ
ಮಾರಾರಿಯಂ ಬಯಸಿ ಭಾವಿಸುವ ವಿಭು ಕೇಳ
ಆತನಂ ನಾವೆಂದು ಬೆಸಕೈದು ಬದುಕುವುದು
ಆತನ ಯಶೋವಲ್ಲಿ ಮೂಜಗಕೆ ಪಬ್ಬುವುದು
ಎಂದೊಲಿದು ನಡೆತಂದು ಮುದ್ದುಗೌಡನ ಮನೆಗೆ
ನಿಂದು ಭಿಕ್ಷೆಯನಾಂತು ಕೈಕೊಂಡು ಕೃಪೆ ಬೆಳಗೆ
ಸುಗ್ಗಗೌಡಿಯ ಮರೆವ ಪುಣ್ಯೋದರಮನಲ್ಲಿ
ಅಗ್ಗಿಸುತ್ತಂ ಮುಟ್ಟಿ ಭಸಿತಮಂ ಇಡುತಲ್ಲಿ
ಸೇನೆಯಂ ರುದ್ರಮುನಿದೇವರಂ ನೋಡುತುಂ
ಮಾನಿ ಚಾಮಲದೇವಿಗಾಗಳಪ್ಪೈಸುತುಂ

ನೆಗೆದನಾಕಾಶಕ್ಕೆ ಶಶಿಬಿಂಬದಂದದಿಂ
ನೆಗೆದನಂಬರತಳಕೆ ಶಾಂತರವಿಯುಂದದಿಂ
ನೆಗೆದಪ್ಪ ಪಪ್ಪಿ ಘನತರ ಪೊಕ್ಕು
ಸೊಗಯಿಸುವ ಶಿವಲಿಂಗ ಮೂರ್ತಿಗೆ ಮನಂ ಮಿಕ್ಕು
ಸರ್ವ ಶಿವಲಿಂಗಮುಂ ಬಿಳ್ಕೊಡುತ್ತಂ ಬಂದು
ಸರ್ವ ಶಿವಭಕ್ತರ್ಗೆ ಸುಖಮನೀವುತೆ ಬಂದು
ಗಗನದಿಂ ನಡೆತಂದನಾ ಕೊಲ್ಲಿಪಾಕಕ್ಕೆ
ಬಗೆವರಘಮುಂ ಕೆಡಿಪ ಪುಣ್ಯ ಸುಸ್ಥಾನಕ್ಕೆ

ಬಂದು ಶಿವಪುರದ ಶಿವನಿಳಯದೊಳಗಂ ಪೊಕ್ಕು
ಇಂದುಧರನಂ ನೋಡಿ ಪುಳಕದಿಂ ಕೈಮಿಕ್ಕು
ನೆನೆವರ ಸಿಧಾನವೆನಿಸುವ ಸೋಮನಾಥನಂ
ಅನುಪಮ ವಿಳಾಸಜಳನಿಧಿ ಸೋಮನಾಥನಂ
ಶರಣ ಸಂಕುಳ ಕಲ್ಪತರು ಸೋಮನಾಥನಂ
ಪರಮ ಶಿವಭಕ್ತ ಕುಲಗುರು ಸೋಮನಾಥನಂ
ಹೊಗಳುತ್ತೆ ಹೊಂಗುತ್ತೆ ಬಂದು ಹತ್ತಿರೆ ಸಾರ್ದು
ಸೊಗಯಿಸುವ ಶಿವಲಿಂಗ ಮೂರ್ತಿಗೆ ಮನಂ ಸಾರ್ದು
ಪುಟ್ಟಿಸಿದ ತಾಯಿತಂದೆ ಬಟ್ಟೆಗೊಡುವುದು ದೇವ
ದಿಟ್ಟಿವಾರರ ನಿಧಿಯೆ ಬಟ್ಟೆಗೊಡುವುದು ದೇವ
ಶರಣರ ಮನೋರಥವೆ ತೆರಹುಗುಡುವುದು ದೇವ
ಕರುಣಿಸಿದ ತೆರದಿ ಧರೆಯೊಪ್ಪಂದೆನೆಲೆ ದೇವ

ಎನೆ ಸೋಮನಾಥನೊಯ್ಯನೆ ತೆರಮನಾದರಿಸಿ
ಮನವಾರೆ ಶರಣಂಗೆ ಕರುಣಮುಂ ಬಿತ್ತರಿಸಿ
ಪುವ್ವಿನೊಳ್ಪರಿಮಳಂ ಬೀಜದೊಳಗಂಕುರಂ
ಓವಿ ಪಲ್ಲವ ಒಪ್ಪುವಂಕುರದೊಳೊತ್ತರಂ
ಅಂಕುರಂ ಬೀಜದೊಳ್ಪುಗುವಂದದಿಂ ಪೊಕ್ಕು
ಶಂಕರನ ನಿಜಲಿಂಗದೊಳಗೆ ಭಾವಂ ಮಿಕ್ಕು
ಒಳ್ಪಿತೆನೆ ತನ್ನನಾ ಲಿಂಗದೊಳಗೋವಿದಂ
ಕೊಲ್ಲಿಪಾಕಿಯ ಸೋಮನಾಥನೋಳ್ತೀವಿದಂ
ಶಿವಲಿಂಗದೊಳಗೆ ಪೊಕ್ಕಂ ಸಿದ್ಧರೇವಣಂ

ಶಿವನ ಸದ್ಭಕ್ತಿ ಪಡೆದ ಸುಖದ ಕಾರಣಂ
ಆಗಳೆರಗಿದವು ಪುಷ್ಪಾವಳಿಗಳಂತಲ್ಲಿ
ಮೇಗೆ ಮೊಳಗಿದವು ದುಂದುಭಿವೃಂದವಲ್ಲಲ್ಲಿ
ನೆಗೆದುದು ವಿಮಾನವಾ ಪುರಜನಂ ಬೆರಗಾಗೆ
ಗಗನದೊಳ್ಪೋಗುತ್ತಮಿರ್ದುದುನ್ನತವಾಗೆ
ಪೋಗಿ ನಂದೀಶ್ವರನ ಬಾಗಿಲೊಳಗಂ ನಿಂದು
ನಾಗಭೂಷಣನ ಕೈಲಾಸದೊಳ್ಪುಗುತಂದು
ಸಿದ್ಧರೇವಣನಲ್ಲಿ ದೇವಂಗೆ ಮೈಯಿಕ್ಕಿ
ಉದ್ಧರಿಸುತೀಶ್ವರಂ ಶಿರದೊಳಗೆ ಕೈಯಿಕ್ಕಿ
ಪುಳಕಿಸುವ ಭಕ್ತನಂ ಕಂಡು ಕರುಣಾಕರಂ
ಆಳವಲ್ಲದಕ್ಕರಿಂ ನೋಡಿ ಶಶಿಶೇಖರಂ
ಮುನ್ನಿನಂದದೊಳೆ ಗಣಪದವಿಯುಂ ಸಲಿಸುತ್ತ
ಉನ್ನತಿಯ ರೇಣುಕನೆನಿಪ್ಪ ನಾಮವನಿತ್ತು
ಆವನುಂ ಪೊಗಳ್ವುದಧಿಕತರನೊಪ್ಪಿದಂ
ದೇವ ದೇವರದೇವ ದೇವ ಪತಿಯೊಪ್ಪಿದಂ
ಸಕಳ ಚಲ್ವಿಂಗೆ ಚಲ್ವಾದ ಗುರುವೊಪ್ಪಿದಂ
ಸಕಳ ಬಲ್ಪಿಂಗೆ ಬಲ್ಪಾದ ಶಿವನೊಪ್ಪಿದಂ
ಸಕಲ ಲೇಸಿಂಗೆ ಲೇಸಾದ ಹರನೊಪ್ಪಿದಂ
ಸಕಲ ಗುರುಗಳ್ಗೆ ಗುರುವಾದಭವನೊಪ್ಪಿದಂ
ಪಂಪಾಪುರಾಂಬೋಧಿ ಪೂರ್ಣೇಂದುವೊಪ್ಪಿದಂ
ಪಂಪಾಪುರಾಧಿಪ ವಿರೂಪಾಕ್ಷನೊಪ್ಪಿದಂ

**ಕಂದ॥** ಅಣಿಯರದಿಂ ನಿಜಭಕ್ತಿಯ
ಗುಣವಂ ತಾನೆನ್ನೊಳೀಗೆ ಶಾಂತಂ ಸರ್ವಂ॥
ತ್ರಿಣಯನ ನೊಲವಿಂದಂ ರೇ- ।
ವಣಸಿದ್ಧನ ಕಂದನೆಂದು ಹಂಪೆಯದೇವ

**ಪಂಚಮಸ್ಥಲ ಸಂಪೂರ್ಣ**